ನಿಧ್ವಗಂಗಾ ವಾಚನಾಲಯ

# ಸಿದ್ಧಗಂಗಾ

ಸಂಪುಟ-28. ಸಂಚಿಕೆ-9. ಸೆಪ್ಟೆಂಬರ್-1992.

## —: ಶಿಕ್ಷಕರ ದಿನಾಚರಣೆ ಸಂದೇಶ :—

ಇಂದಿನ ಶಿಕ್ಷಣದ ಗುಣಮಟ್ಟ ಸಂಪೂರ್ಣವಾಗಿ ಶಿಕ್ಷಕರ ಗುಣಧರ್ಮವನ್ನು ಅವಲಂಬಿಸಿದೆ. ಅವರು ವೃತ್ತಿ ಬೆಳವಣಿಗೆಯ ಬಗ್ಗೆ ಸದಾ ಜಾಗೃತರಾಗಿರಬೇಕು. ಉನ್ನತವಾದ ಮೌಲ್ಯಗಳಕಡೆ ವಿದ್ಯಾರ್ಥಿಗಳನ್ನು ಆಕರ್ಷಿಸಲು ನೆರವಾಗಬೇಕಾದರೆ ವ್ಯಕ್ತಿತ್ವದ ಪ್ರಭಾವ ಮತ್ತು ಒಳ್ಳೆಯ ಸಂಸ್ಕೃತಿಯನ್ನು ಸಾಧನವನ್ನಾಗಿ ಪ್ರಯೋಗಿಸಬೇಕು.

ಮಾನವೀಯ ಮೌಲ್ಯಗಳು ಭ್ರಷ್ಟತೆಯಿಂದ ಇಂದು ನಾಶವಾಗುತ್ತಿವೆ. ಇವನ್ನು ಉಳಿಸಿ ಬೆಳೆಸಿ ಸಮಾಜವನ್ನು ರಕ್ಷಣೆ ಮಾಡುವ ಶಕ್ತಿ-ಸಾಮರ್ಥ್ಯ ಶಿಕ್ಷಕರಿಗೆ ಇದೆ. ಉತ್ತಮ ಅಧ್ಯಾಪಕರು ಇಂದಿನ ಸಮಾಜಕ್ಕೆ ಅಗತ್ಯ ಮತ್ತು ಸರ್ವಶ್ರೇಷ್ಠ. ತಮ್ಮ ಜವಾಬ್ದಾರಿಯನ್ನು ಇನ್ನೊಬ್ಬರ ಮೇಲೆ ವರ್ಗಾಯಿಸುವುದನ್ನು ಕಡಿಮೆ ಮಾಡಬೇಕು.

ಆಡಂಬರ ಪ್ರವೃತ್ತಿ ತೊರೆದು ಮಕ್ಕಳ ಭವಿಷ್ಯ "ಜೀವನ ಜ್ಯೋತಿ" ಪ್ರಜ್ವಲಿಸುವಂತೆ ಮಾಡಲು ಶಿಕ್ಷಕ ವರ್ಗ ಚಿಂತನ ಮಾಡುತ್ತಿರಬೇಕು.

—ಶ್ರೀ ಶ್ರೀ ಶಿವಕುಮಾರಸ್ವಾಮಿಗಳು.

ಪ್ರಕಾಶಕರು:
ಹಳೆಯ ವಿದ್ಯಾರ್ಥಿಗಳ ಸಂಘ.
ಸಿದ್ಧಗಂಗಾ ಕ್ಷೇತ್ರ.

ಶ್ರೀ ಸಿದ್ಧಗಂಗಾ ಮಠಾಧ್ಯಕ್ಷ ತ್ರಿವಿಧ ದಾಸೋಹ ಮೂರ್ತಿಗಳಾದ
**ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ**

**" ವಜ್ರಮಹೋತ್ಸವ ನಿಧಿ ಸಮಿತಿ ".**

" ಶಿವಪಥವನರಿವಡೆ ಗುರುಪಥವೇ ಮೊದಲು "
ಎಂಬಂತೆ ಪೂಜ್ಯ ಶ್ರೀ ಶ್ರೀ ಉದ್ದಾನ ಶಿವಯೋಗಿಗಳ ಕರಕಮಲ ಸಂಜಾತರಾಗಿ 60 ವರ್ಷಗಳ ಸೇವಾ ಮಣಿಹದ ಸ್ಮರಣೆಗಾಗಿ ನಾಡಿನ ಭಕ್ತಕೋಟಿ ವಜ್ರಮಹೋತ್ಸವ ಆಚರಿಸಲು ನಿರ್ಧರಿಸಿದೆ.

ವಜ್ರಮಹೋತ್ಸವ ನೆನಪಿನ ಪ್ರತಿಷ್ಠಾನ :

4 ಕೋಟಿ ರೂಗಳ ವೆಚ್ಚದಲ್ಲಿ
**ಬೃಹತ್ ವಿದ್ಯಾರ್ಥಿ ವಸತಿ ನಿಲಯ**
ಮತ್ತು
**ಬೃಹತ್ ಪ್ರಸಾದ ನಿಲಯ.**
**(16-2-92)** ರಂದು

ಭಾರತದ ಈಗಿನರಾಷ್ಟ್ರಪತಿ **ಡಾ॥ ಶ್ರೀ ಶಂಕರದಯಾಳ ಶರ್ಮ** ಮತ್ತು ಲೋಕಸಭಾಧ್ಯಕ್ಷ **ಶ್ರೀ ಶಿವರಾಜ್ ಪಾಟೀಲ್** ಇವುಗಳ ಶಿಲಾನ್ಯಾಸವನ್ನು ನೆರವೇರಿಸಿದ್ದಾರೆ.

5/-, 10/-, 25/-, 51/-, 101/-, 201/-, 501/-, 1001/ 5001/-, 10,001/-, 35,000 ರೂ.ಗಳ ಕೂಪನ್‌ಗಳು ನಿಧಿ ಸಂಗ್ರಹಕ್ಕಾಗಿ ಮಾರಾಟಕ್ಕೆ ಬಿಡುಗಡೆ ಮಾಡಿದೆ.

ಈ ಸ್ಮರಣಾರ್ಹವಾದ ಪುಣ್ಯಕಾರ್ಯಕ್ಕೆ ನಾಡಿನ ಭಕ್ತಾದಿಗಳು, ಹಿತೈಷಿಗಳು, ಹಳೆಯ ವಿದ್ಯಾರ್ಥಿಗಳು ಕೂಪನ್‌ಗಳನ್ನು ಕೊಳ್ಳುವುದರ ಮೂಲಕ ನಿಧಿಗೆ ಉದಾರವಾಗಿ ನೀಡಬೇಕಾಗಿ ಕೋರುತ್ತೇವೆ.

ಬಿ. ಎಸ್. ಮುದ್ದಪ್ಪ, ಐ.ಎ.ಎಸ್,
ಕಾರ್ಯಾಧ್ಯಕ್ಷರು,
ಎಸ್. ಎಸ್. ಹಸಬಿ,
ಕಾರ್ಯದರ್ಶಿಗಳು.

ಪದ್ಮಭೂಷಣ ಡಾ॥ ಎಂ. ಸಿ. ಮೋದಿ,
ಅಧ್ಯಕ್ಷರು,
ವಜ್ರಮಹೋತ್ಸವ ಸಮಿತಿ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104.

# ಸಿದ್ಧಗಂಗಾ

**ಸಂಪುಟ - 28. ಸಂಚಿಕೆ -9 . ಸೆಪ್ಟೆಂಬರ್ - 1992.**

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಪ್ರವೃತ್ತಿ ನಿವೃತ್ತಿ ಎರಡೋಣಿಗಳ ನಡುವೆ
ಜೀವರಥೋತ್ಸವ ನಡೆದಿರಲು । ಹರಸಿದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

×× ×× ××

ಮೀನು ನೀರಿಗೆ ನಂಟು ಪಕ್ಷಿ ವೃಕ್ಷಕೆನಂಟು
ಗುರು ನಂಟು ಶಿಷ್ಯಕುಲದೊಳಗೆ ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

×× ×× ××

ಸಾಗರ ಲಿಂಗವೆ ಸಾಸಿರ ತರಂಗವೆ
ಚೆಂಗಾವಿ ಧರಿಸಿಬಹ ಚರಲಿಂಗವೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು. ॥

⁜ ⁜ ⁜

—ಹೆಚ್. ವಿ. ವೀರಭದ್ರಯ್ಯ.

## ಶ್ರೀ ಸಿದ್ಧಲಿಂಗೇಶ್ವರ ವಚನ



ಜ್ಞಾನ ಚಕ್ಷುವಿನಲ್ಲಿ ಉದಯವಾದ ರುದ್ರಾಕ್ಷಿಯ
...ಳು ಉರಕಂಠ ಕರ್ಣಮಸ್ತಕದಲ್ಲಿ

## ಶ್ರೀವಾಣಿ

**ಮಡಿ**

ಮಡಿ ಮೈಲಿಗೆಯನ್ನು ಆಚರಿಸದ ಜನಾಂಗವೇ ಇಲ್ಲವೆನ್ನಬಹುದು. ಬಾಹ್ಯ ಮಡಿ, ಅಂತರ್‌ಮಡಿ ಎಂದುಸ್ಥೂಲವಾಗಿ ಮಡಿಯನ್ನು ವಿಭಾಗಿಸಬಹುದು. ನಾವಿಂದು ಬಹಿರಂಗದ ಮಡಿಗೇ ಹೆಚ್ಚು ಪ್ರಾಶಸ್ತ್ಯ ಕೊಡುತ್ತಾ ಬಂದಿದ್ದೇವೆ. ಅಂತರಂಗದ ಮಡಿಯುಬಗ್ಗೆ ಚಿಂತಿಸುವವರು ತುಂಬಾವಿರಳ. ಬಹಿರಂಗದ ಮಡಿ ಬೇಡವೆಂದಲ್ಲ, ಅದೂಬೇಕು ಅದಕ್ಕಿಂತಲೂ ಮುಖ್ಯವಾಗಿ ಅಂತರಂಗದ ಮಡಿಯಕಡೆ ಹೆಚ್ಚು ಗಮನ ಕೊಡಬೇಕು. ಪಾತ್ರೆಯನ್ನು ಹೊರಗೆ ಥಳಥಳಿಸುವಂತೆ ತೊಳೆದರೆ ಸಾಲದು, ಒಳಗೂ ಕಿಲುಬಿಲ್ಲದಂತೆ ಉಜ್ಜಬೇಕು, ಅದಕ್ಕೇಬಸವಣ್ಣನವರು ಮಡಿಮಾಡುವ ವಿಧಾನವನ್ನು ಸಪ್ತಸೂತ್ರಗಳ ಮೂಲಕ ಸರಳಸುಂದರವಾಗಿ ವಿವರಿಸಿದ್ದಾರೆ. ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಮುನಿಯಬೇಡ, ತನ್ನಬಣ್ಣಿಸಬೇಡ, ಇದಿರ ಹಳಿಯಲು ಬೇಡ, ಅನ್ಯರಿಗೆ ಅಸಹ್ಯಪಡಬೇಡ, ಎಂಬುದಾಗಿ ಮಡಿಯ ಒಳಹೊರಗೆಲ್ಲವನ್ನೂ ಮಡಿ ಮಾಡಿದ್ದಾರೆ. ಚೆನ್ನಬಸವಣ್ಣನವರು ಮಂಡೆಮಾಸಿದೊಡೆ ಮಜ್ಜನವ ಮಾಡೆಂಬರು, ವಸ್ತ್ರಮಾಸಿದೊಡೆ ಮಡಿವಾಳನಿಗಿಕ್ಕೆಂಬುವರು, ಮನದಮೈಲಿಗೆಯ ಕಳೆವೊಡೆ ಕೂಡಲ ಚೆನ್ನಸಂಗನ ಶರಣರೊಡನೆ ಅನುಭಾವವ ಮಾಡೆಂಬರು ಎಂದಿದ್ದಾರೆ. ಮಡಿ ಮಾಡಬೇಕಾದುದು ಮನವನ್ನು, ಮೈಯನ್ನು, ಮಾತನ್ನು, ಒಟ್ಟನಲ್ಲಿ ಬಾಳೆಲ್ಲ ಮಡಿಯಾಗಿರಬೇಕು.

ನಮ್ಮಲ್ಲಿ ಒಬ್ಬರು ಸ್ವಾಮಿಗಳಿದ್ದರು, ಮಡಿಯನ್ನುಕುರಿತು ಅವರು ಹೇಳುತ್ತಿದ್ದರು. ಮಡಿಗಳಲ್ಲಿ ಮೂರು ವಿಧಗಳಿವೆ ಎನ್ನುತ್ತಿದ್ದರು. ಸ್ವಚ್ಛಮಡಿ, ಜಾಲಮಡಿ ಒದರು ಮಡಿಎಂದು. ಸ್ವಚ್ಛಮಡಿ ಎಂದರೆ ಉಟ್ಟು ತೊಟ್ಟ ಬಟ್ಟೆಗಳನ್ನು ಅತ್ಯಂತ ಶುಭ್ರ

...ನಲ್ಲಿ ಅದ್ದಿ ತೆಗೆದು
...ನೆ ಉಟ್ಟುತೊಟ್ಟ
...ಎಂದೂ, ವಿವರಿ
...ಬಟ್ಟೆಬರೆಗಳನ್ನು
...ಬುದನ್ನು ಇದು
...ಚಾರಸಂಕಿರಣ
...ೂ ನಡೆದಿವೆ. ಇವಲ್ಲಬ... ...ಡಿಯಾಗಿರುವುದೇ ಆಗಿದೆ. ಪರಿಸರ ಪರಿಶುದ್ಧವಾಗಿರುವುದೆಂದರೆ ಇರುವ ಕಾಡನ್ನೆಲ್ಲ ಕಡಿದು ಬೋಳು ನೆಲವನ್ನು ಸೃಷ್ಟಿಸುವುದಲ್ಲ, ಬದುಕಿಗೆ ಅಗತ್ಯವಾಗಿ ಬೇಕಾದ ಪ್ರಾಕೃತಿಕ ಸಂಪತ್ತನ್ನು ಸಂರಕ್ಷಿಸಿಕೊಂಡು ಬರುವುದೆಂದೇ ತಿಳಿಯಬೇಕು. ಮಡಿಗ್ಮೆ ಅದೆಷ್ಟು ಅರ್ಥದ ಮಗ್ಗುಲುಗಳಿವೆಯೋ ಚಿಂತನ ಮಾಡಬೇಕು. ವ್ಯಕ್ತಿಗೆ ಸಂಬಂಧಿಸಿದಂತೆ ಮೈಮನಗಳ ಮಡಿಯಿರುವಂತೆಯೇ, ಸಮಾಜವೂ ನೈತಿಕತೆಯ ಮಡಿಯನ್ನು ಸಂವರ್ಧಿಸಿಕೊಳ್ಳುವ ಪ್ರಯತ್ನಮಾಡಬೇಕು. ಇಂದು ಸಾರ್ವಜನಿಕ ಜೀವನವೆಂಬುದು ಅದೆಷ್ಟು ಮಲಿನವಾಗಿದೆ ಎಂಬುದನ್ನು ಚಿಂತಿಸಿದ್ದೇ ಆದರೆ ಮಡಿಎಂಬುದೊಂದು ಇದೆಯೇ? ಹಾಗಿರಲು ಸಾಧ್ಯವೇ? ಯಾರಾದರೂ ಹಾಗೆ ಬಾಳಿದವರುಂಟೆ? ಎಂಬೆಲ್ಲ ಮಾತುಗಳು ತೂರಿ ಬಂದಾವು! ನಿರಾಶರಾಗಬೇಕಿಲ್ಲ. ನಮ್ಮ ಹಿರಿಯರು ಅದರಲ್ಲೂ ಅನಕ್ಷರಸ್ಥ ಮುಗ್ಧರು ಅಂತಹ ಮಡಿವಂತ ಬಾಳನ್ನು ಬಾಳಿದ ಉದಾಹರಣೆಗಳೆಷ್ಟೋ ಇವೆ. ಜೀವನದಲ್ಲಿ ಒಂದೇ ಒಂದು ಸುಳ್ಳನ್ನೂ ಆಡಿರದ ಪವಿತ್ರ ಜೀವಿಯೊಬ್ಬ ಶ್ರೀಮಠದಲ್ಲಿದ್ದ. ಕಾಯಕ ಶುದ್ಧನಾಗಿದ್ದ, ಸರಳಜೀವನಕ್ಕೆ ನೇರ ಉದಾಹರಣೆಯಾಗಿದ್ದ. ನಾಲ್ಕಾಣೆಯ ಒಂದು ನಾಣ್ಯ ಸಿಕ್ಕರೆ ನೇರವಾಗಿ ತಂದು 'ಸಿಕ್ಕಿತುಇದು' ಎಂದು ಕೊಡುತ್ತಿದ್ದ. ಸುಳ್ಳುಹೇಳುವವನನ್ನು ಕಂಡರೆ ಸಿಟ್ಟಾಗುತ್ತಿದ್ದ. ಶ್ರೀಮಠದಸುತ್ತ ಇರುವ ಮರಗಳನ್ನು ಬೆಳೆಸಿದ. ಅದುಬೇಕು, ಇದುಬೇಕು, ಎಂದು ಎಂದೂ ಕೇಳದವನಲ್ಲ. ನಗುನಗುತ್ತಲೇ ಒಂದುದಿನ ಶಿವಾಧೀನನಾದ. ಅವನ ಮನ ಮಡಿಯಾಗಿತ್ತು, ಮಾತು ಮಡಿಯಾಗಿರುತ್ತಿತ್ತು, ಬಾಳೆಲ್ಲ ಮಡಿಯಾಗಿತ್ತು, ಮಡಿಯಾಗಿರುವುದು ಎಂದರೆ ಸತ್ಯವಂತರಾಗಿರುವುದು, ನೀತಿವಂತರಾಗಿರುವುದು, ಮಾತು-ಕೃತಿಗಳಲ್ಲಿ ಒಂದೇ ರೀತಿಯಾಗಿರುವುದು. ಮಾನವೀಯತೆಯಿಂದ ಜೀವಿಸುವುದು ಎನ್ನಬಹುದು.

# ಶ್ರೀ ಸಿದ್ಧಲಿಂಗೇಶ್ವರ ವಚನ

ಪರಶಿವನ ಜ್ಞಾನ ಚಕ್ಷುವಿನಲ್ಲಿ ಉದಯವಾದ ರುದ್ರಾಕ್ಷಿಯ
ಹಸ್ತ ತೋಳು ಉರಕಂಠ ಕರ್ಣಮಸ್ತಕದಲ್ಲಿ
ಧರಿಸಿದ ಶಿವಶರಣನೇ ರುದ್ರನು.
ಆ ರುದ್ರಾಕ್ಷಿಯ ಜಪಿಸಿದಾತನೇ ಸದ್ಯೋನ್ಮುಕ್ತನು. ಇದು ಕಾರಣ
ಅಜ ಹರಿ ಸುರಮನು ಮುನೀಶ್ವರರು ಶ್ರೀ ವಿಭೂತಿ
ರುದ್ರಾಕ್ಷಿಯನೆ ಧರಿಸಿ, ಶಿವಲಿಂಗಾರ್ಚನೆಯ ಮಾಡುತಿಪ್ಪರು.
ಪ್ರಮಥಗಣ ರುದ್ರಗಣ ಮುಖ್ಯವಾದ ಗಣಾಧೀಶ್ವರರು
ಶ್ರೀ ವಿಭೂತಿ ರುದ್ರಾಕ್ಷಿಯನೆ ಧರಿಸಿ ಪ್ರಣವ ಸ್ವರೂಪಿಗಳಾಗಿಪ್ಪರು.
ನೋಡಿದವರು ಮುಟ್ಟಿದವರು ಧರಿಸಿದವರು ಜಪಿಸಿದವರೆಲ್ಲ
ಸಕಲ ಪ್ರಪಂಚವನಳಿದು ಪರಶಿವ ಸ್ವರೂಪರಪ್ಪುದು ತಪ್ಪದು ನೋಡಾ.
ಇದು ಕಾರಣ
ನಾನು ವಿಭೂತಿ ರುದ್ರಾಕ್ಷಿಯನೆ ಧರಿಸಿ ಶಿಗಲಿಂಗಾರ್ಚನೆಯಮಾಡಿ
ಪ್ರಣವ ಪಂಚಾಕ್ಷರಿಯನೆ ಜಪಿಸುತ್ತಿದ್ದೆನಯ್ಯಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ!

ಶಿವಭಕ್ತನು ಪರಶಿವನ ಜ್ಞಾನನೇತ್ರದಿಂದ ಉದಯಿಸಿದ ರುದ್ರಾಕ್ಷಿಗಳನ್ನು ಉಕ್ತಸ್ಥಾನದಲ್ಲಿ ಧರಿಸಿ ತಾನೇ ಶಿವನಾಗಿ ಶಿವನಪೂಜೆಯನ್ನು ಮಾಡಬೇಕೆಂದು ಹೇಳಲಾಗಿದೆ.

ಶಿವನ ಸೂರ್ಯನೇತ್ರದಿಂದ ಕಪಿಲವರ್ಣದ ಹನ್ನೆರಡು ಬಗೆಯ ರುದ್ರಾಕ್ಷಿಗಳು, ಚಂದ್ರನೇತ್ರದಿಂದ ಶ್ವೇತವರ್ಣದ ಹದಿನಾರು ಬಗೆಯ ರುದ್ರಾಕ್ಷಿಗಳು, ಅಗ್ನಿನೇತ್ರದಿಂದ ಕೃಷ್ಣವರ್ಣದ ಹತ್ತು ಬಗೆಯ ರುದ್ರಾಕ್ಷಿಗಳು ಹುಟ್ಟಿದವೆಂದು ಧರ್ಮಗ್ರಂಥಗಳಲ್ಲಿ ಹೇಳಲಾಗಿದೆ. ರುದ್ರಾಕ್ಷಿಗಳಲ್ಲಿ ೧ ರಿಂದ ೧೪ ರವರೆಗೂ ಮುಖಗಳಿರುವುವು.

ಶಿವಜ್ಞಾನದ ದೃಷ್ಟಿಯು ಅಂತರಂಗದಲ್ಲಿ ಅಂತರಂಗದ ರುದ್ರಾಕ್ಷಿಯೆನಿಸುವುದು. ರುದ್ರಾಕ್ಷಿಧಾರಣದಿಂದ ಎಷ್ಟೋ ರೋಗಗಳು ಬರುವುದಿಲ್ಲವೆಂದು ಆಧುನಿಕ ಸಂಶೋಧಕರು ಕಂಡು ಹಿಡಿದಿದ್ದಾರೆ.

## ಸಿದ್ಧಗಂಗಾ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ - 572 104
ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು
**ಪ॥ ಚನ್ನಪ್ಪ ಎರೇಸೀಮೆ**

* * *

ಸಂಪಾದಕರು
**ಹೆಚ್. ವಿ. ವೀರಭದ್ರಯ್ಯ**

* * *

ಸಹಸಂಪಾದಕರು
**ಎಂ. ರೇಣುಕಾರಾಧ್ಯ**
**ಪಿ. ಎನ್. ಚಂದ್ರಶೇಖರಯ್ಯ**
**ಬಿ. ವೀರಭದ್ರಯ್ಯ**

* * *

ಜಾಹೀರಾತುವಿಭಾಗ
**ಸಿ. ಬಿ. ಶಂಕರಪ್ಪ**

* * *

ಪ್ರಕಾಶಕರು
**ಹೆಚ್. ಬಿ. ಗಂಗಾಧರಯ್ಯ**
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ**

* * *

ಪ್ರಕಟಣೆಯ ಸ್ಥಳ
**ಶ್ರೀ ಸಿದ್ಧಗಂಗಾಕ್ಷೇತ್ರ**

### ಚಂದಾ ವಿವರ

ವಾರ್ಷಿಕ ಚಂದಾ 25-00ರೂ
ಆಜೀವ ಸದಸ್ಯತ್ವ 300-00


### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.


" ಸಂಪಾದಕರು "
'ಸಿದ್ಧಗಂಗಾ' ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲೆ-572104.


ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

## ಸಂಪಾದಕೀಯ

ಆತ್ಮೀಯಮನವಿ:—

ಶ್ರೀ ಸಿದ್ಧಗಂಗಾಮಠದ ಕಾರಣ ಪುರುಷರಾದ ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ವಜ್ರಮಹೋತ್ಸವ ಮಹಾಯೋಜನೆಯನ್ನು ಭಕ್ತಾದಿಗಳು, ಹಳೆಯವಿದ್ಯಾರ್ಥಿಗಳು ಹಮ್ಮಿಕೊಂಡು ಮುನ್ನಡೆದಿದ್ದಾರೆ. ಪದಾಧಿಕಾರಿಗಳು ಹಗಲಿರುಳು ನಿಸ್ವಾರ್ಥ ಮನೋಭಾವದಿಂದ ದುಡಿಯುತ್ತಿದ್ದಾರೆ. ಯೋಜನೆ ಅತ್ಯಂತ ರಚನಾತ್ಮಕವಾಗಿಅರಳುತ್ತದೆ, ಸಭೆ ಸಮಾರಂಭಗಳ ಉತ್ಸವಕ್ಕೆ ಸೀಮಿತವಾಗದೆ. ಜನಕಲ್ಯಾಣ ಸೇವಾಸಂಕಲ್ಪ ದೀಕ್ಷಿತವಾಗಿ ಸಾಗಿದೆ. ಸುಮಾರು ನಾಲ್ಕುಕೋಟಿಗಳ ಬೃಹತ್ ಯೋಜನೆಯಾಗಿದೆ. ಶ್ರೀಮಠದ ಆಶ್ರಯದಲ್ಲಿ ಬೆಳೆಯುತ್ತಿರುವ ನಾಲ್ಕೂವರೆ ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳ ವಸತಿಗಾಗಿ ವಿದ್ಯಾರ್ಥಿನಿಲಯ, ಪ್ರಸಾದನಿಲಯ, ನೈರ್ಮಲ್ಯ ಸೌಕರ್ಯಗಳ ವ್ಯವಸ್ಥೆಯನ್ನು ತನ್ನ ಗುರಿಯನ್ನಾಗಿಟ್ಟುಕೊಂಡಿರುವ ಸೇವಾ ಸಮಿತಿ ಭರದಿಂದ ಕಾರ್ಯಪ್ರವೃತ್ತವಾಗಿದೆ. ಕಟ್ಟಡಗಳು ನಿರ್ಮಾಣವಾಗುತ್ತಿವೆ, ಪೂಜ್ಯ ಸ್ವಾಮಿಗಳನ್ನು ಗೌರವಿಸುವುದೆಂದರೆ ಅವರ ಸೇವಾಕಾಂಕ್ಷೆಗೆ ಸಕ್ರಿಯವಾಗಿ ಸಹಕರಿಸುವುದೆಂದೇ ಹೃದಯವಂತರೆಲ್ಲ ತಿಳಿದು ಮುಂದೆಬರುತ್ತಿದ್ದಾರೆ. ಲಕ್ಷಗಳಿಂದ ಮೊದಲುಗೊಂಡು ಐದುರೂಗಳವರೆಗೂ ಮುಕ್ತ ಮನಸ್ಸಿನಿಂದ ನೀಡುತ್ತಲಿದ್ದಾರೆ. ಉಳ್ಳವರು ಗಣನೀಯವಾಗಿ ಕೊಟ್ಟಂತೆ, ಬಡವರು ಶಕ್ತಿಮೀರಿಕೊಡುತ್ತಿದ್ದಾರೆ. ಎಲ್ಲರಭಾವನೆಯೂ ಪವಿತ್ರವಾಗಿ ಪ್ರೋತ್ಸಾಹನೀಡುತ್ತಿದೆ ಶ್ರೀಮಠದ ಶಿಕ್ಷಣ ಸಂಸ್ಥೆಗಳಲ್ಲಿ ಕೆಲಸಮಾಡುತ್ತಿರುವ ಎಲ್ಲ ಸಿಬ್ಬಂದಿವರ್ಗದವರೂ ಈಗ ಮುಂದೆಬರಬೇಕು. ಕೆಲವರು ಈಗಾಗಲೇ ತಮ್ಮ ಭಕ್ತಿಕಾಣಿಕೆ ನೀಡಿಸಹಕರಿಸಿದ್ದಾರೆ. ಇದೊಂದು ಪುಣ್ಯಾವಕಾಶ, ಹಿಂಜರಿಯಬಾರದು ಕಷ್ಟಕಾರ್ಪಣ್ಯಗಳು ಇದ್ದಿದ್ದೇ ಆದರೆ ನೆರಳುನೀಡಿ ಬದುಕಿಗೊಂದು ದಾರಿ ತೋರಿಸಿದ ಮಹಾಸಂಸ್ಥೆಯ ಪವಿತ್ರ ಮಣಿಹದಲ್ಲಿ ಎಲ್ಲರ ಭಕ್ತಿಸೇವೆಯೂ ಸೇರಬೇಕು ಯಾರೊಬ್ಬರೂ ಹಿಂದುಳಿಯಬಾರದು ಸಂಪಕವಿಎಂದಂತೆ "ಸೆಟ್ಟಿಯಮಾತು ಲೇಸಣ್ಣ ಬಳ್ಳಕಿರಿದು" -ಎಂಬಂತೆ ಜಿಪುಣತನಮಾಡಬಾರದು. ಶ್ರೀಮಠದ ಅಭಿಮಾನಿಗಳು ಭಕ್ತಾದಿಗಳು ತುಂಬು ಹೃದಯದಿಂದ ಕಾಣಿಕೆ ನೀಡುತ್ತಿರುವಂತೆ, ಉದ್ಯೋಗಿಗಳೂಸಹ ತಮ್ಮಶಕ್ತಿಮೀರಿ ನೀಡುವುದು ಕರ್ತವ್ಯ. 1992ರ ಏಪ್ರಿಲ್ ಒಂದರಂದು ಪರಮ ಪೂಜ್ಯ ಶ್ರೀ ಶ್ರೀಗಳವರ ಜನ್ಮದಿನಾಚರಣೆ ಸಂದರ್ಭದಲ್ಲಿ ಸನ್ಮಾನಿತರಾದ ಡಾ| ಬಸವರಾಜೇಂದ್ರ ಅವರು ಒಂದು ಅರ್ಥಪೂರ್ಣವಾದ ಬೆಲೆಬಾಳುವ ಮಾತನ್ನಾಡಿ ಶ್ರೀ ಮಠಕ್ಕೆ ಸಂಬಂಧಿಸಿದವರೆಲ್ಲರನ್ನೂ ಎಚ್ಚರಿಸಿದವರು "ಪೂಜ್ಯ ಸ್ವಾಮೀಜಿಯವರುನಮಗೆ ಇಷ್ಟೊಂದು ಬೃಹತ್ತಾದ ಸೇವಾಸಂಸ್ಥೆಯನ್ನು ಕೊಟ್ಟಿದ್ದಾರೆ, ಸಹಸ್ರಾರು ವಿದ್ಯಾರ್ಥಿಗಳು ಈಸಂಸ್ಥೆಯಿಂದ ಮುಂದೆಬಂದಿದ್ದಾರೆ. ಬೆಳಕುಕಂಡಿದ್ದಾರೆ. ಅನೇಕರು ಈಸಂಸ್ಥೆಯಆಶ್ರಯದಲ್ಲಿ ಜೀವನೋಪಾಯ ಮಾರ್ಗ ಕಂಡುಕೊಂಡಿದ್ದಾರೆ. ನಿಜಕ್ಕೂ ಅವರೆಲ್ಲ ಪುಣ್ಯವಂತರು. ಆದರೆ ಅವರೆಲ್ಲ ಯೋಚಿಸಬೇಕಾಗಿದೆ. ನಾವು ಸ್ವಾಮಿಗಳಿಗೆ, ಶ್ರೀ ಮಠಕ್ಕೆ ಪ್ರತಿಯಾಗಿ ಏನನ್ನುಕೊಟ್ಟಿವುಎಂದು". ಡಾ| ಬಸವರಾಜೇಂದ್ರರಂತೆ ಅನೇಕ ಹಿರಿಯರು, ವಿಚಾರವಂತರಿಂದು ಕೇಳುತ್ತಿದ್ದಾರೆ. ಅದಕ್ಕೆಲ್ಲ ಉತ್ತರಿಸುವ ಸುವರ್ಣಾವಕಾಶ ಶ್ರೀಮಠದಾಶ್ರಯದಲ್ಲಿ ಸೇವೆಸಲ್ಲಿಸುತ್ತಿರುವ ಎಲ್ಲರಿಗೆ ಒದಗಿ ಬಂದಿದೆ ಈಅವಕಾಶವನ್ನು ಕಳೆದುಕೊಳ್ಳಬಾರದಲ್ಲವೆ ಮುಂದೆ ಬನ್ನಿ. ಇದು "ಸಿದ್ಧಗಂಗಾ" ತಮ್ಮಲ್ಲಿ ವಿನಮ್ರವಾಗಿ ಮಾಡುತ್ತಿರುವ ಆತ್ಮೀಯ ಮನವಿ.

## ಶ್ರೀ ಮದುದ್ಧಾನೇಶ್ವರ ಶತಕಂ

—ಜಿ.ವಿ. ರಾಜಶೇಖರಯ್ಯ, ನೆಲಮಂಗಲ [ಮುಂದುವರಿದುದು]

ಹಿಂದೆ ಬಹುಪಶುಯೋನಿ ನರಕದಿ
ನೊಂದು ಗುರುಪದವನ್ನು ಪಿಡಿದಿ
ನ್ನೆಂದಿಗೂ ಯಮನಾಳ್ಗಳಾಜ್ಞೆಗೆ ಸಿಗದೆ ಜನಿಮೃತಿಯಾ ।
ಬಂಧ ವುತ್ತರಿಸುಳಿವೆ ಕೊಡು ಮನ
ಗೆಂದು ನರತನು ಬೇಡಿ ಪಡೆದಿಹೆ
ಬಂದು ಬೋಧಿಸಿ ಜೀಯ ಉದ್ಧಾನೇಶ ದಯವಾಗೋ ॥

ಉದಕನರಕದಿ ಬಳಲಿ ಮೂತ್ರದ
ನದಿಯೊಳೀ ಧರೆಗಿಳಿದು ಮೂರ್ಛೆಗು
ದೊದಗಿ ಕಣ್ಣನು ಬಿಡಲುಬಹುವಿಷಯಾಶೆ ಕಣ್ಣಿಯೊಳೂ ।
ವಿದಿತ ಮನಪಶು ತೊಡರಿ ಮುಂದಿನ
ಪದವಿಯರಿಯದೆ ಮರೆದು ಬೆರೆದಿದೆ
ವಿಧಿನಿವಾರಣ ಜೀಯಉದ್ಧಾನೇಶ ದಯವಾಗೋ ॥

ಹಿಂದಿನಾರ್ಯರು ಲೋಕದಡವಿಯೊ
ಳೆಂದಿನರಿಷಡ್ವರ್ಗ ಮುಳ್ಳನು
ಹೊಂದಿದಾಮದತರುಗಳೆಂಟರೆ ಮೋಹಮೃಗಬಗೆಯಾ ।
ಸಂದಿನೊಳಗಿಹ ಜ್ಞಾನಮೂಲಿಕೆ
ಯಿಂದ ಭವರುಜೆ ಕಳೆವುದೆಂಬರು
ಬಂದು ತೋರಿಸಿ ಜೀಯ ಉದ್ಧಾನೇಶ ದಯವಾಗೋ ॥

ಮರಣರೂಪಿನ ದೇಹಯಂತ್ರವು
ಕರಚರಣ ನಖ ಕರುಳುಮಾಂಸವು
ನರದೆಲುವು ಮಲಮೂತ್ರ ರಕ್ತವು ಕೂದಲಿನಬೊಂಬೆ ।
ಮರದೊಲಿರೆ ಜಡದಿಂಬವಿದನಾ
ಪರಮ ಸೂತ್ರವ ಪಿಡಿದು ಕುಣಿಸುವ
ಚರಮ ಮಾಂತ್ರಿಕ ಜೀಯಉದ್ಧಾನೇಶ ದಯವಾಗೋ ।

ಯಾವಕಾಲದೊಳೀ ನೊ ತನುವಿಗೆ
ಜೀವಹಿಡಿದಿಹ ಕೀಲದಾವುದೊ
ಯಾವದಾರಿಯೊಳಾದ ಘಳಿಗೆಯೊಳಾವಕಾರಣದೇ ।
ಸಾವುದೆಂಬುದ ನರಿಯದಳೂರಿರೆ
ಭಾವದರುವಿನ ಕೀಲಿ ತೋರಿಸಿ
ಸಾವಧಾನಿಯೆ ಜೀಯಉದ್ಧಾನೇಶ ದಯವಾಗೋ ॥

## ಶ್ರೀ ಕ್ಷೇತ್ರ ಸಿದ್ಧಗಂಗಾ

ಕವಿತಾಕೃಷ್ಣ, ಕ್ಯಾತ್ಸಂದ್ರ, ತುಮಕೂರು-4.

ಶರಣ ಗಿರಿಶೈಲದಿ ಹರ ಕರುಣೋದಯವಾಗುತ್ತಿದೆ
ಹಣ್ಣಿಮೆಯ ಚಂದ್ರೋದಯವಾದಂತೆ ।
ಕಾಯಕವಿಲ್ಲಿ ಸಾಗುತ್ತಲಿದೆ ಪರಿಪೂರ್ಣದೆಡೆಗೆ
ಬಸವನೆ ಮರಳಿ ಅವತರಿಸಿ ಬಂದಂತೆ ॥

ವಿದ್ಯಾದಾನವು 'ಮೇಣ್' ಅನ್ನದಾನವು ಮೇಳೈಸಿದೆ
ಶಿವ-ಪಾರ್ವತಿಯರು ಜೊತೆಗೂಡಿದಂತೆ ।
ಸಂಸ್ಕೃತದ ವೇದ ಘೋಷವು ಕೇಳಿ ಬರುತಲಿದೆ
ಇದೇ ಮಹರ್ಷಿಗಳಾಶ್ರಮವು ಎಂಬಂತೆ ॥

ಸಿದ್ಧಗಂಗೆಯು ಉಕ್ಕೇರಿ ಬರುತಿಹಳಿಲ್ಲಿ ತಾನು
ಸಾಗರ ಮಥಿಸೆ ಬಂದ ಆಮೃತದಂತೆ।
ಸಿರಿ ಸಿದ್ಧಲಿಂಗನು ತಾನ್ ಶೋಭಿಸುತಲಿಹ ನಿಲ್ಲಿ
ಕರುನಾಡ ಹೃದಯವೇ ತಾನಾದಂತೆ ॥

ಮಂದಹಾಸವ ಚೆಲ್ಲಿ ಶಾದೆ ನಲಿದಾಡುತಿ ಹಳು
ಪಾಲ್ಗುಣಮಾಸದ ಪ್ರಭಾತ ರವಿಯಂತೆ ।
ಮುಕ್ತಿಕಾಂತೆ ಮೈಮರೆದು ಮೆರೆಯುತಿಹಳು
ಈ ಕ್ಷೇತ್ರಕೆ ಸಾಟಿ ಇನ್ನಿಲ್ಲವೆಂಬಂತೆ ॥

ಸಂಸ್ಕೃತಿ ಇಲ್ಲಿ ಔನತ್ಯವೇರಿ ಮೆರೆದಾಡುತಲಿದೆ
ಶಿವನ ಮುಡಿಗೇರಿದ ಸಿರಿಗಂಗೆಯಂತೆ ।
ಋಷಿ ರೂಪಿಲ್ಲಿ ಕಾವಿವಾಸನವನ್ನುಟ್ಟು ಬೆಳಗುತಿದೆ
ಅಲ್ಲಮನೆ ತಾನವತರಿಸಿ ಬಂದಂತೆ ॥

ಮಂಗಳದ ಮನೆಯಾಗಿ ಹೊಂಬೆಳಕು ಚೆಲ್ಲುತಿದೆ
ಇಲ್ಲಿ ನಿತ್ಯ ಶಿವರಾತ್ರಿ ಎಂಬಂತೆ ।
ಸ್ವಾಮಿ ಶಿವಕುಮಾರರು ದೇವಮಾನವರಾಗಿಹರು
ಭಾರತಾಂಬೆಯ ಪ್ರಾಣವೆಂಬಂತೆ ॥

# ಧರ್ಮ ಮತ್ತು ವಿಜ್ಞಾನ

(ಕಳೆದಸಂಚಿಕೆಯಿಂದ)

ನರಸಿಂಹಮೂರ್ತಿ, ಪ್ರಶಿಕ್ಷಕರು, ಸಿದ್ಧಗಂಗಾ ಶಿಕ್ಷಕರ ತರಬೇತಿ ಸಂಸ್ಥೆ, ತುಮಕೂರು-2

ಪ್ರಗತಿಗೆ ಮತಧರ್ಮ ಸಹಕಾರಿಯೇ ಇಲ್ಲವೇ ಅಡ್ಡಿಯೇ ಎಂಬ ಪ್ರಶ್ನೆಯಲ್ಲಿ ಧರ್ಮದೃಷ್ಟಿ ಮತ್ತು ವೈಚಾರಿಕ ದೃಷ್ಟಿಗಳು ಮೂಲತಃ ಪರಸ್ಪರ ವಿರುದ್ಧವಾದವುಗಳು ಎಂಬರ್ಥ ಬರುತ್ತವೆ. ವಿಜ್ಞಾನ ಮತ್ತು ತಾಂತ್ರಿಕವಿಜ್ಞಾನ ನಮಗೆ ಪಶ್ಚಿಮದೇಶಗಳಿಂದ ಬಂದಿರುವುದರಿಂದ ಈ ಎರಡು ದೃಷ್ಟಿ ಕೋನಗಳಲ್ಲಿನ ವಿರುದ್ಧ ಕಲ್ಪನೆಯ ಮೂಲಗಳನ್ನು ಅಲ್ಲಿಯೇ ಹುಡುಕಬೇಕು. ಸರ್ವಶಕ್ತ ದೇವರಲ್ಲಿ ಅಪನಂಬಿಕೆ ಪಡಬಹುದೆಂದು ಹೆದರಿ ಅಲ್ಲಿನ ಶಾಸ್ತ್ರವೇತ್ತರು ಈ ಜಗತ್ತಿನ ಕಾರ್ಯವೆಲ್ಲ ದೇವರ ಆಜ್ಞೆಯಂತೆಯೇ ನಡೆಯುತ್ತಿದೆ ಎಂದು ಒತ್ತಿ ಹೇಳ ತೊಡಗಿದರೆ ಇಷ್ಟು ಸಾಕೆಂದು ತಿಳಿದು ಅವರು ಪ್ರಕೃತಿಯ ವ್ಯವಸ್ಥಿತ ಗುಣಗಳಿಂದ ಜಗತ್ತಿನ ಕಾರ್ಯಭಾರವನ್ನು ಅರ್ಥಮಾಡಿಕೊಳ್ಳುವ ಎಲ್ಲಾ ಕಾರ್ಯಗಳನ್ನು ನಿರ್ಬಂಧಿಸಿದರು. ಉದಾಹರಣೆಗೆ ದೇವರು ಯಾವ ಆಧಾರವೂ ಇಲ್ಲದೆ ಭೂಮಿಯನ್ನು ತೂಗಿಹಾಕಿದನು ಎಂಬ ಶಾಸ್ತ್ರದ ಹೇಳಿಕೆಯನ್ನು ಎಲ್ಲರೂ ಒಪ್ಪಿಕೊಳ್ಳಬೇಕು. ಇದು ಹೇಗಾಗುವುದೆಂದು ಪ್ರಶ್ನಿಸಬಾರದು ಎಂದು ಮಿಲಾನಿಯ ಆಂಬ್ರೋಸನು ವಿಧಿಸಿದನು. ಒಬ್ಬ ಕುಶಲಕರ್ಮಿ ಉಪಕರಣಗಳ ಸಹಕಾರದಿಂದ ನೇಮಿಸುವಂತೆ ದೇವರು ಇದನ್ನು ನಿರ್ಮಿಸಲಿಲ್ಲ. ಅವನ ಶಾಸನ ಬಲದಿಂದ ನಿರ್ಮಿಸಿದನು ಎಂಬುದು ಅವನ ನಂಬಿಕೆ. ಇಂತಹ ನಿಲುವು ವಿಜ್ಞಾನದ ಬೆಳವಣಿಗೆಯನ್ನು ಕುಂಠಿತ ಗೊಳಿಸಿತು; ಪಾಷಂಡವಾದವನ್ನು ಅಡಗಿಸಲು ನಿಯಮಿಸಿದ್ದ ಮತೀಯ ನ್ಯಾಯಃಸ್ಥಾಗಳು ಬ್ರೂನೋವನ್ನು ಸುಡುವಂತಹ ಪ್ರಮಾದಗಳಿಗೆ ಎಡೆಕೊಟ್ಟಿತ್ತು. ಆದರೆ ಬ್ರೂನೋ ಪಾಷಂಡವಾದಿಯಾಗಲಿಲ್ಲ. ಅವನಿಗೆ ಪ್ರಕೃತಿಯ ನಿಯಮಗಳು ದೇವರ ಇರುವಿಕೆ ಹಾಗೂ ಅವನ ಸಂಕಲ್ಪಿತ ವ್ಯವಸ್ಥೆಗೆ ಒಂದು ಪ್ರಮಾಣವೆನಿಸಿತ್ತು. ಗ್ರಹವ್ಯವಸ್ಥೆಯ ಸಾಮರಸ್ಯದಲ್ಲಿ ನೂಟನ್ನನೂ, ಕೆಪ್ಲರನೂ, ದೈವಸೃಷ್ಟಿಯ ನಿಖರತೆ ಸೌಂದರ್ಯಗಳನ್ನು ಕಂಡರು. ಒಂದು ಸಣ್ಣ ಹುಳುವಿನ ದೇಹದಲ್ಲಿರುವ ನಂಬಲಾಗದಷ್ಟು ಜಟಿಲ ವ್ಯವಸ್ಥೆಯನ್ನು ಕಂಡು ಆಶ್ಚರ್ಯಗ್ರಸ್ತನಾದ ಸ್ವಾಮರ್ಡ್ಯಾಮನು ಹೀಗೆ ಉದ್ಗರಿಸಿದನು. "ಈ ಕ್ರಿಮಿಯ ದೇಹವ್ಯವಸ್ಥೆಯಲ್ಲಿ ದೇವರು ಕರುಣೆಗೆ ಸಾಕ್ಷವನ್ನು ತೋರಿಸುತ್ತಾನೆ" ವೈಚಾರಿಕತೆಯ ಕುತೂಹಲಕ್ಕೆ ಅಡ್ಡಿ ಮಾಡಿ ಮತಧರ್ಮವು ಖಂಡಿತವಾಗಿಯೂ ಪ್ರಗತಿಗೆ ಅಡ್ಡಿ ಮಾಡಿದೆ. ಆದರೆ ಮಾನವನ ಚಿಂತನೆ ಮತ್ತು ನಡವಳಿಕೆಯಲ್ಲಿ ಕಾಣುವ ಏರು ಬೀಳುಗೆಗಳಲ್ಲಿ ಇಂದು ಸ್ಥಿತಿ ಪೂರ್ತಿ ತಲೆಕೆಳಕಾಗಿಲ್ಲವೆ?

ಸೃಷ್ಟಿಯ ಬಾಹ್ಯ ವಸ್ತುಗಳು ಸೃಷ್ಟಿಕರ್ತನ ತೇಜಸ್ಸಿನ ಸಂಕೇತಗಳು ಎಂದು ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು ಹೇಳಿದುದನ್ನು ಬ್ರೂನೋ ಮತ್ತು ನ್ಯೂಟನ್ನರು



ಬೇರೆಬೇರೆಯಾಗಿ ಪುಷ್ಟೀಕರಿಸಿದ್ದಾರೆ. ವಿಜ್ಞಾನವನ್ನು ಸೃಷ್ಟಿಸಿದ ಇಂದ್ರಿಯ ಚೈತನ್ಯ ಯುಕ್ತನಾದ ಮನುಷ್ಯನೆಂಬ ಸತ್ಯವನ್ನ ವಿಜ್ಞಾನವು ಹಿಂದಿನಿಂದ ಅಲ್ಲಗಳೆಯಲಾಗದು ಎಂದು ಹೇಳಿ ಓರ್ಬಿನನು ಜ್ಞಾನವು ಸದಾ ಅತಃದೃಷ್ಟಿಯಿಂದ ಕೂಡಿರಬೇಕು ಎಂಬ ಎಚ್ಚರಿಕೆಯನ್ನು ಪ್ರತಿಧ್ವನಿಸಿದ್ದಾನೆ.

ಆದರೆ ವಿಜ್ಞಾನ ಇದನ್ನೇ ಮಾಡಿದುದು ಆಶ್ಚರ್ಯಕರವಾಗಿದೆ. ಇದರ ಫಲವಾಗಿಯೇ ಇಂದು ವಿಜ್ಞಾನ ತತ್ವ ಮೃತ್ಯು ಗೀತೆಯಾಗಿದೆ. ವಿಜ್ಞಾನಕ್ಕೆ ಜೀವವಿಲ್ಲದ ವಸ್ತುಗಳು ಮಾತ್ರ ಪ್ರಕೃತಿ ಸಹಜವಾಗಿದ್ದು, ಜೀವ ಮತ್ತು ಚೈತನ್ಯಗಳು ತಲೆ ಚಿಟ್ಟು ಹಿಡಿಸುವ ಸಮಸ್ಯೆಗಳಾಗಿವೆ. ಅನ್ವಯ ವಿಜ್ಞಾನವು ತಾಂತ್ರಿಕತೆಯಾಗಿ, ಅತಿ ವೇಗವಾಗ ವರ್ಧಿಸಿ ಮಾನವರನ್ನು ನಿರ್ನಾಮದೆಡೆಗೆ ಒಯ್ಯುತ್ತಿದೆ.

ಹಿಂದಿನ ಕಾಲದ ಧರ್ಮ ದೃಷ್ಟಿ ಕಡೆಯ ಪಕ್ಷ ತಾತ್ರಿಕವಾದರೂ, ದೇವಿಯ ಪೂರ್ಣತೆ ಸೃಷ್ಟಿವಿಕಾಸದ ತುದಿಯಲ್ಲಿರುವ ಮನುಷ್ಯನ ಸಹಾನುಭೂತಿ, ಸದ್ವಿವೇಚನೆ, ಸಂವೇದನೆಗಳನ್ನು ಒಳ್ಳೆಯದರೊಂದಿಗೆ ಸೇರಿಸಿತ್ತು. ಆದರೆ ಇಂದಿನ ವಿಜ್ಞಾನದ ಶಿಸ್ತು, ಆಧುನಿಕ ಅರ್ಥಶಾಸ್ತ್ರ ವಿಷಯ ವೃತ್ತಿಯನ್ನು ಹೆಚ್ಚುವಸ್ತುಗಳ ಸ್ವಾಮ್ಯವನ್ನು ಉತ್ತಮವೆಂದು ಗುರುತಿಸಿದೆ.

## ಪರಿಹಾರವೆಲ್ಲಿದೆ ?

ನಿಜವಾದ ಮತಧರ್ಮ ಗ್ರಹಿಕೆಯ ಪುನರುಜ್ಜೀವನ ಜಗತ್ತಿನ ಎಲ್ಲಾ ಜನರ ಅದರಲ್ಲಿಯೂ ಭಾರತೀಯರನ್ನು ಬಿಡುಗಡೆ ಮಾಡಬಲ್ಲದು. ಪುರುಷ ಪ್ರಯತ್ನಕ್ಕೇ ನಿರುತ್ಸಾಹ ಕೋರುವ ಹಳೆಯಕಾಲದ ಭಾರತೀಯರ ವಿಧಿವಾದ ಇಂದಿಲ್ಲ. ಬೌದ್ಧ ಮತ್ತು ಕ್ರಿಶ್ಚಿಯನ್ ಅರ್ಥಶಾಸ್ತ್ರದ ಬಗ್ಗೆ ಮಾತನಾಡುವಾಗ ಪೂಯಾಖರ ಎಂಬುವನು ಹೇಳುವ ಪ್ರಕಾರ, ಆರ್ಥಿಕ ಚಟುವಟಿಕೆಗಳು ಜೀವನದ ಅಗತ್ಯಗಳಿಗೆ ಅಧೀನವಾಗಿರಬೇಕೆಂದು. ಎಲ್ಲಾ ವ್ಯವಸ್ಥಿತ ಮತಧರ್ಮಗಳ ವಿಶಿಷ್ಟ ಮತಸೂತ್ರಗಳನ್ನು ಮರೆತು ಧರ್ಮವು ಮೂಲಭೂತ ವ್ಯಾಕುಲಕ್ಕೆ ಸಂಬಂಧಿಸಿದ್ದುದು ಎಂದು ವ್ಯಾಖ್ಯಾನಿಸಬಹುದು. ಇಂದಿನ ಅಗತ್ಯಗಳನ್ನು ಪೂರೈಸುವಲ್ಲಿ ವೈಜ್ಞಾನಿಕ ತಾಂತ್ರಿಕತೆ ವಿಫಲವಾಗುತ್ತಿದೆ. ಮೂಲ ವ್ಯಾಕುಲತೆಯನ್ನು ಮುಟ್ಟಲ್ಲ ಎಂಬುದನ್ನು ಎಲ್ಲರೂ ಗುರುತಿಸುವುದರಿಂದ ಕಟ್ಟಕಡೆಗಾದರೂ ವೈಚಾರಿಕತೆ ಮತ್ತು ಧಾರ್ಮಿಕ ಅಂತಃದೃಷ್ಟಿಗಳೆರಡರ ಬಗ್ಗೆಯೂ ಹೊಸಕಲ್ಪನೆಗಳು ಹುಟ್ಟುತ್ತಿವೆ. ನಿಜವಾಗಿಯೂ ಹೇಳಬೇಕಾದರೆ ಇಂದು ಬದುಕುಳಿಯ ಬೇಕಾದರೂ ನಿಜವಾದ ಧಾರ್ಮಿಕ ನಿಲುವನ್ನು ಮರಳಿ ಪಡೆಯುವುದು ಅಗತ್ಯವಾಗಿದೆ. ಪ್ರಕೃತಿಯು ಎಲ್ಲರ ಅಗತ್ಯಕ್ಕೂ ಸಾಕಾಗುವಷ್ಟು ಸಂಪತ್ತನ್ನು ಒದಗಿಸುತ್ತದೆ ಆದರೆ ಎಲ್ಲರ ದುರಾಸೆಗೂ ಸಾಲುವಷ್ಟಿಲ್ಲ. ಮನುಷ್ಯನ ಕಲ್ಪನೆ ಅತೀತವಾಗಿದೆ. ಎರಿಚ್ ಕಾಲರ್‌ನು ಎಲ್ಲಾ ಬಗೆಯ ತರ್ಕಗಳನ್ನೆಲ್ಲಾ ವಿಶ್ಲೇಷಿಸಿ ವಿಜ್ಞಾನವೂ ಅಂಥ ಶ್ರದ್ಧೆಯ ಧಾರ್ಮಿಕ ನಿಲುವಿನಂತೆಯೇ ಪ್ರಗತಿಗೆ ಅಡ್ಡಿಯಾಗುವುದೆಂದು ತೋರಿಸಿದ್ದಾನೆ.

ಸಾಂಪ್ರದಾಯಕ ಧಾರ್ಮಿಕ ನಿಲುವಿನಲ್ಲಿ ದೂರವಿಡಲೇಬೇಕಾದಂಥ ಆರ್ಥಿಕ ರಕ್ಷಣೆಯನ್ನು (ಅರ್ಥ) ಬೆನ್ನಟ್ಟುವುದಾಗಲೀ, ಶೃಂಗಾರ ಸೌಂದರ್ಯೋಪಾಸನೆಗಳ ಪ್ರೇರಣೆಗಳತೃಪ್ತಿ (ಕಾಮ) ಯಾಗಲೀ, ಯಾವಾಗಲೂ ನೀತಿಪ್ರಜ್ಞೆಯ ಹತೋಟಿ ಯಲ್ಲಿ (ಧರ್ಮ) ಇರಬೇಕಾಗುವುದು. ಈ ದಾರಿಯಿಂದ ಮಾತ್ರ ಮನುಷ್ಯನು ಆತ್ಮ ತೃಪ್ತಿಯ ಎಲ್ಲಾ ನಿಬಂಧನಗಳಿಂದ ಬಿಡುಗಡೆಯನ್ನೂ (ಮೋಕ್ಷ) ಪಡೆಯಬಲ್ಲ. ಅಮಿತ ಸುಖಾಪೇಕ್ಷೆಯ ಉಪಾಸನೆಗೆ ಅರ್ಪಿಸಿಕೊಂಡಿರುವ ಸಮಾಜದಲ್ಲಿ ಮನುಷ್ಯನು ಎಷ್ಟು ಸುಖವಾಗಿರಬಲ್ಲ ?

## ಮಾನವನ ಚಟುವಟಿಕೆಗಳ ಪೂರ್ವಾನುಕ್ರಮ

ನಮ್ಮ ಬಳಕೆಯ ಸಂಸ್ಕೃತಿಯ ವಿಪರೀತ ದುರಾಶೆಯಿಂದ ಈ ಭೂಮಿಯ ಸಂಪತ್ತಿನ ನಿಕ್ಷೇಪವೆಲ್ಲಾ ಬತ್ತಿಹೋಗುವಷ್ಟು ಬಳಸಿದ್ದಾಗಿದೆ. ಋಷಿಗಳ ಸಂಪ್ರದಾಯ ಪ್ರೇರಿತವಾಗಿದ್ದ ಈ ಸಂಪತ್ತಿನ ಪುನರುಜ್ಜೀವನ ಪುನರ್ಬಳಕೆಯ ವಿಧಾನಗಳು ಇಂದಿನ ಮಾನವನಿಂದ ನಿರಾಶೆಯಾಗಿ ಹೋಗಿವೆ. ಇತ್ತೀಚಿನ ದಿನಗಳಲ್ಲಿ ಜೀವಿಗಳು ಪರಿಸರಶಾಸ್ತ್ರ, ವಿಜ್ಞಾನ ಮತ್ತು ವೈಚಾರಿಕತೆಗಳ ಕಡೆ ಗಮನಸೆಳೆಯುತ್ತಿವೆ. ಇದಕ್ಕೆ ಪರಿಹಾರವೆಂದರೆ ಧರ್ಮದ ಮೂಲ ಮೌಲ್ಯಗಳನ್ನು ಪುನರುಜ್ಜೀವನಗೊಳಿಸುವುದು ಎಂದು ಅನೇಕ ವೈಚಾರಿಕರು ನಂಬುತ್ತಾರೆ, ಇಲ್ಲಿ ನಾವು ಗಮನಿಸಬೇಕಾದುದಿಷ್ಟು. ಉದಾಹರಣೆಗೆ ಉಳುವ ಸಮಯವನ್ನು ಒಂದು ದೊಡ್ಡ ಘಟನೆ ಎಂದು ಕಾಣುತ್ತಿದ್ದರೂ, ಉಳುವ, ಸಸಿಗಳನ್ನು ನೆಡುವ ಕಾರ್ಯ ದೇವರ ಸೃಷ್ಟಿಕಾರ್ಯಕ್ಕೆ ಹೋಲುತ್ತಿದ್ದವು. ಮನುಷ್ಯನು ಬಯಸುವ ಶಾಂತಿ ಒಬ್ಬೊಬ್ಬರಿಗೂ ಬೇರೆಯಾಗಿಸಲಾರದು. ಇದನ್ನು ಮನುಷ್ಯ ಮತ್ತು ಪ್ರಕೃತಿ ಹಂಚಿಕೊಳ್ಳಬೇಕಾಗುತ್ತದೆ. ಉಪನಿಷತ್ತಿನ ವಾಕ್ಯಗಳಂತೆ ಗಗನದಲ್ಲಿಶಾಂತಿ, ಭೂಮಿಯಲ್ಲಿಶಾಂತಿ, ನೀರಿನಲ್ಲಿಶಾಂತಿ ಗಿಡಮರಗಳಲ್ಲಿ ಶಾಂತಿ, ವಿಶ್ವದಲ್ಲಿಶಾಂತಿ, ಶಾಂತಿಯಲ್ಲಿ ಶಾಂತಿ ನನಗೆಸಿಗಲಿ ಎಂಬುದನ್ನು ವಿವರಿಸಲಾಗಿದೆ. ಇದನ್ನು ನಾವು ಮರೆತುದ್ದರಿಂದಲೇ ನಮ್ಮ ಕಾಡುಗಳು ಮಾಯವಾಗುತ್ತಿವೆ, ನದಿಗಳು ಕಲುಷಿತಗೊಳ್ಳುತ್ತಿವೆ. ಮನುಷ್ಯರಲ್ಲಿ ಸಾಮರಸ್ಯ ಕಡಿಮೆಯಾಗುತ್ತಿದೆ.

ಮನುಷ್ಯ--ಮನುಷ್ಯರ ಭಾವೈಕ್ಯ ಇಂದೂ ದೂರದಗುರಿಯಾಗಿರಬಹುದು. ಆದರೆ ಆದಿಕ್ಕಿನಲ್ಲಿ ಸ್ವಲ್ಪವಾದರೂ ಮುನ್ನಡೆಯೋಣ, ಬೇರೆ ರೀತಿಯಲ್ಲಿ ದೇವರನ್ನು ಕಾಣುವಂತಹ ಜನರಮೇಲೆ ಹಿಂಸಾ ಪ್ರಯೋಗವನ್ನು ಯಾವ ಧರ್ಮವೂ ಒಪ್ಪುವುದಿಲ್ಲ. ನಾವು ಈರೀತಿ ಮುಂದುವರಿಯುವುದಾದರೆ ನಮ್ಮ ಋಣಾತ್ಮಕ ನಿಲುವಿನಿಂದ ಬಿಡುಗಡೆ ಹೊಂದುವುದಷ್ಟೇ ಅಲ್ಲ. ನಮ್ಮನ್ನು ಪೂರ್ಣಮನುಷ್ಯರನ್ನಾಗಿಸುವ ಅನುಭಾವಗಳ ಕಡೆ ಮುನ್ನಡೆಯಬಹುದು.



ಸತ್ಯವನ್ನು ಕಾಣಲು ಒಂದೇ ಒಂದು ಮಾರ್ಗವಿದ್ದಿದ್ದರೆ, ಒಂದೇರೀತಿಯಲ್ಲಿಲ್ಲದ ಜನರಿಗೆ ಬೇರೆ ದಾರಿಯೇ ಇರುತ್ತಿರಲಿಲ್ಲ ಬೇರೆ ಬೇರೆ ಸ್ವಭಾವದ ಜನರಿಗೆ ಇದು ಸಾಲಿನಷ್ಟೇ ಕಷ್ಟವಾಗುತ್ತಿತ್ತು. ಈ ದೃಷ್ಟಿಯಿಂದ ಹೇಳುವುದಾದರೆ ಇಷ್ಟೊಂದು ಗುರುಗಳು, ಧರ್ಮ ಬೋಧಕರಿರುವುದು ತುಂಬಾ ಮಹತ್ವದ್ದು ಎಂದು ಸ್ವಾಮಿ ವಿವೇಕಾನಂದರು ಹೇಳಿದ್ದಾರೆ.

**ಶಿಕ್ಷಣದ ಕೆಲಸ :—**

ಈಗಿನ ವಿದ್ಯಾಭ್ಯಾಸವು ವಿದ್ಯಾರ್ಥಿಗಳಲ್ಲಿ ವೈಜ್ಞಾನಿಕ ಮನೋಧರ್ಮವನ್ನು ಹರಡುವ ಕೆಲಸ ಮಾಡುತ್ತಿಲ್ಲ. ಹೆಚ್ಚಿನ ಸಂಖ್ಯೆಯ ಶಾಲೆಗಳಲ್ಲಿ ಬೋಧನೆ ಎಂದರೆ ಒಮ್ಮುಖ ಮಾತಿನಕ್ರಮ, ಶಿಕ್ಷಕರು ತಿಳಿವಳಿಕೆಯ ಮಾತುಗಳನ್ನು ಹೇಳುತ್ತಿದ್ದು, ವಿದ್ಯಾರ್ಥಿಗಳು ಸುಮ್ಮನೆ ಕೇಳುತ್ತಿರುವುದು, ಈ ರೀತಿಯ ಬೋಧನಾವ್ಯವಸ್ಥೆಯಲ್ಲಿ ವಿದ್ಯಾರ್ಥಿಗಳು ತಾವುಕೇಳಿದುದರಬಗ್ಗೆ ಪ್ರಶ್ನಿಸುವುದಾಗಲೀ, ತಮ್ಮತಮ್ಮಲ್ಲೇ ಇಲ್ಲವೇ ಶಿಕ್ಷಕರೊಡನೆ ಚರ್ಚಿಸುವುದಾಗಲೀ ಇಲ್ಲ. ಹೆಚ್ಚಿನ ಗ್ರಾಮಾಂತರ ಶಾಲೆಗಳಲ್ಲಿ ಶಿಕ್ಷಕರು ಹೇಳಿದ ಪ್ರತಿಯೊಂದನ್ನು ವಾಕ್ಯ ವಾಕ್ಯವಾಗಿ ಎಲ್ಲಾ ವಿದ್ಯಾರ್ಥಿಗಳೂ ಪುನರಾವರ್ತಿಸುವ ಪದ್ಧತಿ ಇದೆ. ತರಗತಿಗಳಲ್ಲಿ ಪ್ರಶ್ನೆ-ಉತ್ತರರೂಪದಲ್ಲಿ ಬೋಧಿಸುವ ಯೋಚಿಸಿಯೋ ಉತ್ತರಿಸಬೇಕಾದಂತಹ ಪ್ರಶ್ನೆ, ಸಮಸ್ಯೆಗಳನ್ನು ಮನೆಯಲ್ಲಿ ಬಿಡಿಸಿಕೊಂಡು ಬರಲು ವಿದ್ಯಾರ್ಥಿಗಳಿಗೆ ಕೊಡುವ ಹೆಚ್ಚು ಕ್ರಿಯಾತ್ಮಕವಾದ ವಿದ್ಯಾಭ್ಯಾಸ ವಿಧಾನಗಳನ್ನು ಅನುಸರಿಸುವಂತಹ ಶಾಲೆಗಳನ್ನು ನಾವು ಅಪರೂಪವಾಗಿ ಕಾಣಬೇಕಾಗಿದೆ. ಇತ್ತೀಚಿನ ಅಧ್ಯಯನಗಳ ಪ್ರಕಾರ, ವಿದ್ಯಾಭ್ಯಾಸವೆಂದರೆ ಕೇಳುವುದು ಮತ್ತು ಉಪಾಧ್ಯಾಯರು ಹೇಳಿದುದನ್ನು ಗಿಳಿಯಹಾಗೆ ಪುನರುಚ್ಚರಿಸುವುದು. ಆದ್ದರಿಂದ ನಮ್ಮ ಶಾಲೆಗಳಲ್ಲಿ ಹೆಚ್ಚಿನ ವೈಜ್ಞಾನಿಕ ಮನೋಧರ್ಮ ಪ್ರಸರಿಸುವುದೇಇಲ್ಲ. ಪ್ರೌಢಶಾಲೆಯಿಂದ ಸ್ನಾತಕೋತ್ತರ ಹಂತದವರೆಗೂ ವಿದ್ಯಾಭ್ಯಾಸಕ್ಕೆ ಸೀಳುಹಾದಿ ಹುಡುಕುವಂತಹ ಪ್ರವೃತ್ತಿ ಮಕ್ಕಳಲ್ಲಿಹೆಚ್ಚಿ, ಕೇವಲ ಶಿಕ್ಷಕರ ಮನೆಗಳಿಗೆ ಖಾಸಗಿಯಾಗಿ ಪಾಠಕಲಿಯಲು ಹೋಗುವುದೇ ಹೆಚ್ಚಾಗಿದೆ. ಇವೆಲ್ಲ ಅಂಶಗಳು ವೈಜ್ಞಾನಿಕ ಮನೋಧರ್ಮ ಬೆಳೆಯಲು ಅಡ್ಡಿಮಾಡುತ್ತವೆ.

ಎಲ್ಲಾ ವಿದ್ಯಾಭ್ಯಾಸ ವ್ಯವಸ್ಥೆಯೂ ಪರೀಕ್ಷೆಗಳಮೇಲೆ ಕೇಂದ್ರೀಕೃತಗೊಳ್ಳುವುದು ಎಲ್ಲದರಮೇಲೂ ಪರೀಕ್ಷೆಗಳು ಆಧಿಪತ್ಯ ನಡೆಸುವುದನ್ನು ನಾವು ಕಾಣುತ್ತಿದ್ದೇವೆ. ಇತ್ತೀಚಿನ ಪರಿಸ್ಥಿತಿಗಳಲ್ಲಿ ವಿದ್ಯಾರ್ಥಿಯು ಪಡೆದಿರುವ ಸರ್ಟಿಫಿಕೇಟ್ ಅಥವಾ ಅಂಕಪಟ್ಟಿಗೂ ಆತನ ಜ್ಞಾನದ ಮಟ್ಟಕ್ಕೂ ಅರ್ಥಾತ್ ಸಂಬಂಧವಿಲ್ಲದಿರುವುದು ದಿನನಿತ್ಯ ಕಂಡುಬರುವ ವಿಚಾರವೆಂಬುದನ್ನು ನಾವೆಲ್ಲರೂ ಗಮನಿಸಬೇಕು. ವೈಜ್ಞಾನಿಕ

ತಳಹದಿಯ ಆಧಾರದ ಮೇಲೆ ನಡೆದ ಶಿಕ್ಷಣ ನಿಜವಾಗಿ ಸರ್ವತೋಮುಖ ಜೀವನಕ್ಕೆ ಅನುಕೂಲ ಮಾಡಿಕೊಡುವುದಲ್ಲದೆ ರಾಷ್ಟ್ರಪ್ರಗತಿಗೂ ಎಡೆಮಾಡಿಕೊಡುತ್ತದೆ.

ಒಬ್ಬ ವಿದ್ಯಾರ್ಥಿಯ ಪ್ರಗತಿಯನ್ನು ಕೇವಲ 3 ಗಂಟೆಗಳಲ್ಲಿ ನಡೆಯುವ ಪರೀಕ್ಷೆಯಿಂದ ಅಳೆಯುವ ಸಾಧನ ತಂತ್ರ ವಿಫಲವಾಗುತ್ತದೆ. ಪ್ರತಿ ಸಂದರ್ಭದಲ್ಲಿಯೂ ಶಿಕ್ಷಣ ಕ್ಷೇತ್ರದಲ್ಲಿ ಆಗುವಷ್ಟು ಅನಾಹುತ ಘಟನೆಗಳು ಬೇರೆ ಇನ್ಯಾವ ಕ್ಷೇತ್ರದಲ್ಲಿಯೂ ಆಗುತ್ತಿಲ್ಲ ಎಂಬುದನ್ನು ದಿನಂಪ್ರತಿ ಕಾಣುತ್ತಿದ್ದೇವೆ. ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಶಿಕ್ಷಣ ತಜ್ಞರು ಮುಖ್ಯವಾಗಿ ಶಿಕ್ಷಣಕ್ಕೆ ರೂಪಾಂತರ ಕೊಡುವ ಸಂಪನ್ಮೂಲ ವ್ಯಕ್ತಿಗಳು ಇಂದಿನ ಅಹಿತಕರ ಘಟನೆಗಳನ್ನು ಹೋಗಲಾಡಿಸಿ, ಸುಸಂಸ್ಕೃತ, ಸತ್ವಶಾಲೀ, ಹಾಗೂ ಆರ್ಥಿಕ, ಸಾಮಾಜಿಕ, ನೈತಿಕ, ಆಧ್ಯಾತ್ಮಿಕ ಮುಂತಾದ ಶಿಕ್ಷಣದ ಮೌಲ್ಯಕ್ಕೆ ನೆರವುಮಾಡಿಕೊಳ್ಳಲು ಸಹಕಾರಿಯಾಗುವುದು ನಮ್ಮೆಲ್ಲರ ಹೊಣೆಯಲ್ಲವೆ ?

ಶ್ರೀ ಅರಿಯೂರು ನರಸಿಂಹಮೂರ್ತಿಗಳು ಕಳೆದ ಎರಡು ಸಂಚಿಕೆಗಳಲ್ಲಿ ಧರ್ಮ ಮತ್ತು ವಿಜ್ಞಾನ ಎಂಬ ಲೇಖನವನ್ನಿತ್ತು ಉಪಕರಿಸಿದ್ದಾರೆ. ಶ್ರೀಯುತರಿಗೆ "ಸಿದ್ಧಗಂಗಾ" ಅಭಿನಂದನೆಗಳನ್ನು ಸಲ್ಲಿಸಿದೆ. ಸಿದ್ಧಗಂಗಾದ ಮುಂದಿನ ಸಂಚಿಕೆಗಳಲ್ಲಿ ಇದೇ ಲೇಖಕರಿಂದ "ಭಾರತೀಯ ಪರಂಪರೆಗೆ ಗಣಿತ ಶಾಸ್ತ್ರಜ್ಞರುಗಳ ಕೊಡುಗೆ" ಲೇಖನವು ಪ್ರಕಟಗೊಳ್ಳಲಿದೆ.

---

## ಓ ಮಾನವ

ಓ ಮಾನವನೇ, ತಾರುಣ್ಯವನ್ನು ಮುಪ್ಪಿನಿಂದ ಒಪ್ಪಿಕೊ,
ಶ್ರೀಮಂತಿಕೆಯನ್ನು ಬಡತನದಿಂದ ಒಪ್ಪಿಕೋ,
ಬಲವನ್ನು ಅಶಕ್ತತೆಯಿಂದ ಒಪ್ಪಿಕೊ,
ಸುಖವನ್ನು ದುಃಖದಿಂದ ಒಪ್ಪಿಕೋ,
ಆಡಂಬರವನ್ನು ನಿರಾಡಂಬರದಿಂದ ಒಪ್ಪಿಕೊ,

**ಓ ನನ್ನ ಅನುಯಾಯಿಗಳೇ,**

ಈ ಲೋಕವೆಂಬುದೊಂದು ಸುಂದರ ಹೂದೋಟ, ನೀನು ಅದರಲ್ಲಿ ಅರಳಿದ ಸುಗಂಧಭರಿತ ಹೂವಂತೆ, ಹುಟ್ಟಿಬಂದಿರುವೆ. ನಿನ್ನ ಸುವಾಸನೆ ನಾಲ್ಕು ದಿಕ್ಕಿಗೂ ಪ್ರಸರಿಸಲಿ, ಆಗಮಾತ್ರ ನಿನ್ನ ಜನ್ಮ ಸಾರ್ಥಕವಾಗುತ್ತದೆ. ಬಿಸಿಲಿಗೆ ಪುಷ್ಪಬಾಡಿ ಬಿರುಗಾಳಿಗೆ ಕೆಳಗೆ ಬಿದ್ದು ಮಣ್ಣು ಪಾಲಾಗದಂತೆ ನಿನ್ನ ಜೀವನವೂ ಹಾಳಾಗದಿರಲಿ. ಮಾನವರಿಂದ ದೇವರವರೆಗೂ ನಿನ್ನ ಸೇವೆ ಮೀಸಲಾಗಲಿ.

**ಸಂತ ಹಜರತ್ ಖಾಜಾ ಬಂದೇ ನವಾಜರು**



## ಶ್ರೀ ಲಂಬೋಧರ ಸ್ತುತಿ

ರಾಗ:- ನಾದಬ್ರಹ್ಮ



ಲಂಬೋಧರನೇ ಶರಣು ಶರಣಯ್ಯ
ಗೌರಿಸುತ ಗಣನಾಯಕ ಮೂರ್ತಿಯೇ
ತ್ರಿಮೂರ್ತಿಗಳ ಪೂಜೆ ಅರ್ಪಣೆ
ಪ್ರಥಮ ದೇವತೆಯೇ ನಮೋನಮಃ
ಶರಣು ಶರಣು ಏಕದಂತನೇ ||೧||

ಕೈಲಾಸ ಓಂಕಾರ ಮೂರ್ತಿಯೇ
ಪಾರ್ವತಿ ಶ್ರೀಮಂಗಳ ಕುವರನೆ
ಪರಮೇಶ್ವರ ಮೆಚ್ಚಿನ ಏಕದಂತನೇ
ಕುಮಾರಸ್ವಾಮಿಯ ಸಹೋದರನೇ
ಶರಣು ಶರಣು ಶುಭದಾಯಕನೇ ||೨||

ಭಕ್ತಕೋಟಿ ಹೃದಯಗಳ ದೇವತೆ
ಶಿಷ್ಟ ರಕ್ಷಿಸುತ್ತಾ ದುಷ್ಟ ಸಂಹರಿಸುತ್ತ
ವಿಶ್ವರೂಪ ಗಣಪತಿ ಮೂರ್ತಿಯೇ
ಶರಣಾದವರ ಕೈಬಿಡದೆ ರಕ್ಷಿಪ
ಲಂಬೋಧರ ಶರಣು ಶರಣು ||೩||

ಸಿದ್ಧರಾಜ್ ಐವಾರ್ ೧೫ಬಿ ಎರಡನೇತಿರುವು ಶ್ರೀಸಿದ್ಧಗಂಗಾ ಬಡಾವಣೆ ತುಮಕೂರು

## ಭಾರತದ ಮಾದರಿಹಳ್ಳಿ

ಎನ್. ಎಸ್. ಗದಗಕರ, ನವಲೂರ ಅಗಸ, ಶುಕ್ರವಾರಪೇಟೆ, ಧಾರವಾಡ.

ಇದು ಹಳ್ಳಿ, ನಮ್ಮ ಹಳ್ಳಿ, ಭಾರತದ ಹಳ್ಳಿ.
ಗಾಂಧೀಜಿ ಆಗಲಾಶಿಸಿದ ಮಾದರಿಹಳ್ಳಿ.
ಊರ ಮಧ್ಯದಿ ಅವನ ತತ್ವಪ್ರತೀಕ ಮೂರ್ತಿ.
ಒಂದು ಕಾಲಕ್ಕೆ ಅತ್ಯಂತ ಉತ್ಸಾಹದಿಂದ ನಿಲ್ಲಿಸಿದುದು ಅದು !
ಈಗ ಚಳಿ ಮಳೆ, ಬಿರುಗಾಳಿಯ ಹೊಡೆತಕ್ಕೆ ಸಿಕ್ಕು
ಮುಖಾಳಾಗಿದೆ ಗಾಸಿಯಾಗಿದೆ ಆ ಮಹಾತ್ಮನ ಮೊಗ !
ಬಳಿಯಲ್ಲಿಯೆ Arrack shop !
ಅವನು ಪ್ರತಿಬಂಧಿಸಲೆಳಿಸಿದಂತೆ ನಾಯಿಯ ಕೊಡೆಯಂತೆ
ಹಬ್ಬಿವೆ ಮೂಲಿ ಮೂಲಿಗು ಅವು.
ಹಳ್ಳಿಯ ಸೆರಗಿನಲ್ಲಿ ನೆಲಸಿದೆ ಪ್ರಾಥಮಿಕ-ಮಾಧ್ಯಮಿಕ ಶಾಲೆಗಳು
ಗಂಡ ಭೇರುಂಡಗಳಂತೆ !
ಅವಕ್ಕೆ ತಲುಪುವ ಮಾರ್ಗಗಳೋ (ರಸ್ತೆ ಹೆಸರು ದಂಡ !)?
ಅಸ್ತವ್ಯಸ್ತ, ಅಂಕು ಡೊಂಕು ಸರ್ಪದೋಪಾದಿ.
ಮನಸ್ಸು ಮಾಡಿದ್ದರೆ ಎನ್. ಸಿ. ಸಿ. ದಳ ದುರಸ್ತ ಮಾಡಬಹುದಿತ್ತು !
ಆದರೇನು ? ದಿನ ಬಂದವು ದಿನ ಹೋದವು
ಹಳ್ಳಿಯ ಸ್ವರೂಪ ಉಳಿದಿದೆ ಯಥಾಸ್ಥಿತಿ.
ಉದ್ಯೋಗದ ಹೆಸರಿನಲಿ ನಿರುದ್ಯೋಗ ಮನೆ ಮಾಡಿದೆ !
ಕೋರ್ಟ್ ಕಚೇರಿ ನ್ಯಾಯ ನಿಗದಿ, ಹೊಣೆಗೆಟ್ಟ ರಾಜಕಾರಣ ಚರ್ಚೆ ನಿರಂತರ
ಅದೊ ಊರಗರಡಿ ಮನೆ ! ಕೆಂಪು ಬಿಳಿ ಪಟ್ಟೆ ಥಾಳು ಥಾಳು.
ಯುವಕರೊ ? ಎಲ್ಲಿಯೊ ಇರುವರು.
ಒಳಗೆ ಬರಿದೊ ಬರಿದೊ ತೆರವೊ ತೆರವೊ
ಊರಿಗೆ ಕಳೆಕಟ್ಟಿಸುವ ಕೇಂದ್ರ-ಸಿನೆಮಾ ಥಿಯೇಟರ್ "ಚಿತ್ರಾ"
ಸಾಕಷ್ಟು ವಿರೂಪ, ಆದರೂ ಐದನೆಯವಾರ
ಪಡುವಾರಹಳ್ಳಿ ಪಾಂಡವರು ಚಿತ್ರ ನಡೆದಿದೆ ವೈಭವಶಾಲಿಯಾಗಿ.
ಜಾತ್ರೆ, ನಿಬ್ಬಣ, ಉರುಸು, ಉಪಹಾರ ಗೃಹ
ಹೆಚ್ಚಿಸಿದೆ ನಮ್ಮೂರಿಗೆ ಉಂವು.
ಆದರೂ ರಸಹೀನ ಎನ್ನಲಾರೆ ಅದಕ್ಕೆ ಯಾವ ಮಾನದಲೂ
ರೋಮ ಹರ್ಷ ಕತೆಗೆ ಕೊನೆ ಇಲ್ಲ.........................ಅಲ್ಲಿ
ಇದು ಹಳ್ಳಿ ನಮ್ಮ ಹಳ್ಳಿ, ಮುಂದರಿದ
ಭಾರತದ ಮಾದರಿ ಹಳ್ಳಿ !

## ಮಹಾ ಮನೆ

ಸಿದ್ದರಾಜ್ ಐವಾರ್, 15/89, 2ನೇ ಕ್ರಾಸ್, ಸಿದ್ಧಗಂಗಾ ಬಡಾವಣೆ, ತುಮಕೂರು-2

೧೨ ವೇ ಶತಮಾನವನ್ನು ಸುವರ್ಣಾಕ್ಷರದಲ್ಲಿ ಬರೆಯುವಂತಹ ಯುಗ. ಕರ್ನಾಟಕದಲ್ಲಿ ೧೨ರ ಶತಮಾನದ ಸಮಯದಲ್ಲಿ ಆಧ್ಯಾತ್ಮಿಕ, ಧಾರ್ಮಿಕ, ನೈತಿಕ ಪ್ರಗತಿಯನ್ನು ಮಹತ್ವಪೂರ್ಣವಾದ ಘಟನೆಗಳಿಂದ ಕೂಡಿ, ವೇದಗಳ ಕಾಲದಿಂದಲೂ ನಿರಂತರವಾಗಿ ಹರಿದು ಬಂದಿದೆ. ಇಲ್ಲಿ ಬಸವಣ್ಣನವರ ಪಾತ್ರ ಬಹು ಮುಖ್ಯವಾದುದ್ದು. ಇವರು ವೀರಶೈವ ಮತವನ್ನು ಉದ್ಧಾರ ಮಾಡಿದಲ್ಲದೆ ಕಾಯಕಕ್ಕೆ ಮನ್ನಣೆಯಿಟ್ಟು ಏಕದೇವ ಪೂಜೆಯನ್ನು ವಿಧಿಸಿ, ಸರ್ವಸಮತೆ ಹಾಗೂ ಸಾರ್ವಭ್ಯುದಯ ತತ್ವಗಳ ಆಧಾರದ ಮೇಲೆ ಸಮಾಜವನ್ನು ಕಟ್ಟಲು ಶ್ರಮಿಸಿದರು.

ಬಸವಣ್ಣ ಬಯಸಿದ ಉದಾತ್ತ ಸಮಾಜಕಾರ್ಯವನ್ನು ಅವರದೇ ಆದ ಧಾರ್ಮಿಕ ಚೌಕಟ್ಟಿನಲ್ಲಿ ಉಂಟುಮಾಡಿದ ಕ್ರಾಂತಿಯನ್ನು ಬಲಪಡಿಸಲು ಸಮಕಾಲೀನ ಅನೇಕ ಶಿವಶರಣ–ಶರಣೆಯರು ಅಡಿಪಾಯವಾಗಿದ್ದಾರೆ.

ಅಲ್ಲಮಪ್ರಭು, ಚೆನ್ನಬಸವಣ್ಣ, ಸಿದ್ಧರಾಮಣ್ಣ, ಮಡಿವಾಳ ಮಾಚಿದೇವ, ಅಕ್ಕಮಹಾದೇವಿ, ಗಂಗಾಂಬಿಕೆ, ನೀಲಾಂಬಿಕೆ, ಅಕ್ಕನಾಗಮ್ಮ, ಅಜಗಣ್ಣ, ಮುಕ್ತಾಯಕ್ಕ, ಬಿಜ್ಜಳರಾಯ, ರೇವಣಸಿದ್ದ ಘನಲಿಂಗ ರುದ್ರಮುನಿ, ಮರುಳಸಿದ್ದ ಮಲ್ಲಿಕಾರ್ಜುನ ಪಂಡಿತಾರಾಧ್ಯ, ಏಕೋರಾಮ, ಏಕಾಂತರಾಮ, ನೋಳಿಗೆ ಮಾರಯ್ಯ, ನುಲಿಯ ಚಂದಯ್ಯ, ಹಡಪದ ಅಪ್ಪಣ್ಣ, ಮರುಳು ಶಂಕರದೇವರು, ಸೊಡ್ಡಳ ಬಾಚರಸ, ಕಿನ್ನರಿ ಬ್ರಹ್ಮಯ್ಯ, ಘಟ್ಟವಾಳಯ್ಯ, ಶರಣ ಆದಯ್ಯ, ಬಹುರೂಪಿ ಚೌಡಯ್ಯ, ವಚನ ಭಂಡಾರಿ ಶಾಂತರಸ, ಶಿವನಾಗಮಯ್ಯ, ಕಪನಯ್ಯನಾಯಕ ಬೊಮ್ಮರಸ ಕೇಶವರು, ಅಂಬಿಗರ ಚೌಡಯ್ಯ, ವೈದ್ಯ ಸಂಗಣ್ಣ, ಒಕ್ಕಲಿಗ ಮುದ್ದಯ್ಯ ಕುರುಬರ ಗೊಲ್ಲಾಳ, ತೆಲುಗೇಶ ಮಸಣಯ್ಯ, ಮಂಜಣ್ಣತ್ರಯರು, ಹಾವಿನಹಾಳ ಕಲ್ಲಯ್ಯ, ಉರಿಲಿಂಗಿದೇವ, ನಿಜಲಿಂಗ ಚಿಕ್ಕಯ್ಯ, ವರದಾನಿ ಗುಡ್ಡವ್ವ, ದಸರಯ್ಯ, ಡೋಹರ ಕಕ್ಕಯ್ಯ, ಮೇದರ ಕೇತಯ್ಯ ಗಾಣದ ಕನ್ನಪ್ಪ, ಕೊಂಡಗುಳಿ ಕೇಶಿರಾಜ ಇವರೇ ಬಸವಣ್ಣನವರ ಸಮಕಾಲೀನರು. ಇವರುಗಳು ಬಸವರಾಜನ ವಿಚಾರ ಕ್ರಾಂತಿಗೆ ತತ್ವಜ್ಞಾನ ಹಾಗೂ ವೈರಾಗ್ಯಗಳಿಗೆ ಬೆಂಬಲವಿತ್ತು, ಪೂರ್ಣ ಪ್ರಮಾಣವಾಗಿ ಬಸವಣ್ಣ ಕಟ್ಟುವ ಸಮಾಜಕಾರ್ಯಗಳಿಗೆ ಅಡಿಪಾಯವಾಗಿ ಶ್ರಮಿಸಿದರು.

ಮೇಲಿರುವ ಸಮಕಾಲೀನರಲ್ಲಿ ಇಲ್ಲಿ ಹಲವರನ್ನ ಮಾತ್ರ ಸೂಕ್ಷ್ಮವಾಗಿ ಪರಿಚಯಿಸಿ ಕೊಳ್ಳೋಣವೇ ?



### ಅಲ್ಲಮಪ್ರಭು

ವೈರಾಗ್ಯ ಚಕ್ರವರ್ತಿಎಂಬ ನಾಮಧೇಯದ ಅಲ್ಲಮಪ್ರಭು ಶುದ್ಧವೂ, ಸಮಾಜ ದೃಷ್ಟಿಯಲ್ಲಿ ಸಮಾಜ ಕಟ್ಟಲು ನೆರವಾದನು. ಮನುಜರ ಜೀವನದ ಎಲ್ಲವೂ ಅವನ ವಚನಗಳಲ್ಲಿ ಅಭಿವ್ಯಕ್ತಗೊಂಡಿದ್ದು, ವ್ಯಕ್ತಿತ್ವ ಎಲ್ಲ ಕಾಲಕ್ಕೂ, ಎಲ್ಲಾ ದೇಶಗಳಿಗೂ ಅನ್ವಯವಾಗಿ ವ್ಯಾಪಕಗೊಂಡಿದೆ. ಅಲ್ಲದೇ ಶ್ರೀಮಂತ ಗೊಳಿಸಿದೆ. ಇದರಿಂದಾಗಿ ಜೀವನದ ಬದಲಾವಣೆಗಳನ್ನು ಸಹಾ ಕಾಣಬಹುದು. ಇಂದಿನ ವೈಜ್ಞಾನಿಕ ಯುಗದಲ್ಲಿ ಹಳೆಯ ಶ್ರದ್ಧೆಗಳು ಕುಸಿಯುತ್ತಿವೆ ಎಂಬುದನ್ನು ಸ್ಪಷ್ಟವಾಗಿ ಗಮನಿಸಬಹುದು.

### ಚನ್ನಬಸವಣ್ಣ

ಹನ್ನೆರಡನೇ ಶತಮಾನದಲ್ಲಿ ಬಹುಮುಖಕ್ರಾಂತಿಯ ಕರ್ಣಧಾರತ್ವವನ್ನು ವಹಿಸಿ, ಕೊನೆಯವರೆಗೂ ನೆಡೆಸಿರುವ ಹೆಗ್ಗಳಿಕೆ ಚನ್ನಬಸವಣ್ಣನವರ ಪಾಲಾಗಿದೆ. ಬಸವಣ್ಣ ರಚಿಸಿದ ಜಾತ್ಯಾತೀತ ಹಾಗೂ ದಯಾಪೂರ್ಣ ಸಮಾಜದ ಮುನ್ನಡೆಗೆ ಶ್ರಮಿಸಿದವರಲ್ಲಿ ಚನ್ನಬಸವಣ್ಣನವರು ಒಬ್ಬರೆಂದರೆ ತಪ್ಪಾಗಲಾರದಷ್ಟೆ. ಅತ್ಯಲ್ಪ ವಯಸ್ಸಿನಲ್ಲೇ ಅಗಾಧವಾದ ಆತ್ಮಜ್ಞಾನವನ್ನು ಸಂಪಾದಿಸಿ, ಆಚಾರ ವಿಚಾರಗಳನ್ನು ಅನುಭಾವಿಗಳಾಗಿ, ಪ್ರಸಾರದಲ್ಲಿ ಪರಿಣಾಮಿಯಾಗಿ ಸರ್ವಸಂಸಾರ ವಿರಹಿತರಾದವೆನಿಸಿದವರು.

### ಸಿದ್ಧರಾಮೇಶ್ವರ

ಸಿದ್ಧರಾಮೇಶ್ವರರು ಬಸವಣ್ಣ ರಚಿಸಿದ ಜಾತ್ಯತೀತ ಮತ್ತು ದಯಾಪೂರ್ಣ ಸಮಾಜ ಮುನ್ನಡೆಯನ್ನು ಶ್ರಮಿಸಿ, 'ಶಿವಕೀರ್ತ ಶರಧಿಶಶಿ' ಎಂದು ಕರೆಸಿಕೊಂಡವರು. ಇವರ ಪ್ರತಿಫಲವೇ ವಚನ ಸಾಹಿತ್ಯದ ವ್ಯಕ್ತಿ ಸಂವೃದ್ಧಿಯಾಗಿ ಬೆಳೆದು "ಶೂನ್ಯ ಸಂಪಾದನೆ"ಯಲ್ಲಿ ಅಮೋಘವಾದ ಪರಿಪಕ್ವ ಫಲವಾಯ್ತು. ಆಧ್ಯಾತ್ಮಗೆ ಕಳೆನೀಡಿತೇ ವಿನಃ ಅಸತ್ಯಗೆ, ಅನ್ಯಾಯಕ್ಕೆ ಅವಕಾಶವಿಲ್ಲದಾಯ್ತು ಆದುದರಿಂದಲೇ ಅನುಭವ ಮಂಟಪವು ಭೂಕೈಲಾಸವಾಯಿತು, ಸಮಾಜವಿಕಾಸ ಮುನ್ನಡೆಗೆ ಸಿದ್ದರಾಮರು ಹಿರಿದಾದ ಸೇವೆ ಸಲ್ಲಿಸಿದ್ದಾರೆ.

### ಮಡಿವಾಳ ಮಾಚಿದೇವ

ಮಾಚಿದೇವರು ಕಾರ್ಯ ತತ್ವದ ವಾಖ್ಯೆನವಾಗುವಂತೆ ತಮ್ಮ ಜೀವನವನ್ನು ತೊಡಗಿಸಿಕೊಂಡು, ದಿನಚರಿಯ ಕಾರ್ಯ ಕಲಾಪ ಜೀವನ ವಿಧಾನಗಳಿಂದ ಸಮಗ್ರ ಶರಣ ಭಕ್ತಿ ಗೌರವ ಅಭಿಮಾನಿಗಳಿಗೆ ಪಾತ್ರರಾದವರು. ಅಲ್ಲಮ ಪ್ರಭುಗಳು, "ಕತ್ತಲೆಯೊಳಗೆ ಬೆಳಕು ಹೊಕ್ಕಿದಂತಾಗಿದೆಯೆಂದು ಶರಣ ಮಡಿವಾಳ ಮಾಚಿದೇವ ಕೃಷಿಯಿಂದ" ಎಂದು ಮಾಚಿದೇವರನ್ನ ಕೊಂಡಾಡಿದ್ದಾರೆ. ಅಲ್ಲದೇ ಮಡಿವಾಳ ಮಾಚಿದೇವ ನಿರ್ಭೀತ ನ್ಯಾಯಪರರು ಹಾಗೂ ನಿಷ್ಠಾಪವಾದಿಗಳಾಗಿದ್ದರು.

ಅಕ್ಕಮಹಾ...

ಬಸವರಾಜ ರಚಿಸಿದ ಧಾರ್ಮಿಕ ... ಸಾರ್ಥಕಗೊಳಿಸ... ಕಾರ್ಯದಲ್ಲಿ ಸ್ತ್ರೀಯರು ಸಹ ಸಹಾಯಕರಾ... ಕಾಣಬಹುದ... ಚನ್ನಮಲ್ಲಿಕಾರ್ಜುನನನ್ನೇ ಪತಿಯಾಗಿ ... ದೇವಿ, ... ಪತ್ನಿಯರಾದ ಗಂ... ಗೆ ... ತಂದು ಕೊಟ್ಟವರು ... ಬಯಸಿದೊಡೆ ಸುಖ... ಡೆಯ ... ಅಕ್ಕಳ ನೀತಿ.

ಅಂಬಿಗ...

ಯಾವ ಇಷ್ಟದೇವರೂ ಮಣಿಯದೇ ... ತನ್ನ ವಚನಗಳ ಅಂಕಿತವಾಗಿ ಉಪಯೋಗಿಸಿ, ದಿಟ್ಟತನ ತೋರಿಸಿದವರೆಂದರೆ ಅಂಬಿಗರ ಚೌಡಯ್ಯ ಮೊದಲಿಗ. ಇವರ ವಚನಗಳು ಕಾದ ಸೀಸೆಯಂತಿದ್ದರೆ ಹಿತರಿಗೆ ಬೆಸುಗೆಯ ಸೀಸೆ ದಂತಿದೆ. ಬಸವಾದಿ ಪ್ರಮಥರ ಪಾಳಿನಲ್ಲಿ ಅಂಬಿಗರ ಚೌಡಯ್ಯನ ಹೆಸರು ಶಾಶ್ವತ. ಇವರ ವಚನಗಳಲ್ಲಿ ಆಳವಾದ ಅನುಭವ ಮತ್ತು ಸಾಮಾಜಿಕ ಪ್ರಜ್ಞೆಗಳು ಎದ್ದು ಕಾಣುತ್ತವೆ.

### ವೈದ್ಯ ಸಂಗಣ್ಣ

ಕನಸುಗಾರ ಬಸವರಾಜನ ಸಮಕಾಲಿನವನಾಗಿ, ವಚನಕಾರನೆಂದೇ ಎನಿಸಿದ ವೈದ್ಯ ಸಂಗಣ್ಣನ 24 ವಚನಗಳು ಮಾತ್ರ ಶಿವಾನುಭವ ಗ್ರಂಥ ಮಾಲೆಯಲ್ಲಿ ಪ್ರಕಟನೆಯಾಗಿ ಲಭ್ಯವೆನಿಸಿವೆ. ಇವರ ವಚನಗಳೆಲ್ಲವೂ ಸಾಮಾನ್ಯವಾಗಿ ವೈದ್ಯಶಾಸ್ತ್ರ ಸಂಬಂಧವು ಎಂದು ಅಭಿಪ್ರಾಯವಾಗಿದೆ.

(ಆಧಾರ)

ಕಿಡಿಕಿಡಿ ಕೆದರಿದಡೆ, ಎನಗೆ ಹಸಿವು ತೃಷೆ ಅಡಗಿತೆಂಬೆನು. ಮುಗಿಲು ಹರಿದು ಬಿದ್ದಡೆ, ಎನಗೆ ಮಜ್ಜನಕ್ಕೆರೆದರೆಂಬೆನು. ಗಿರಿ ಮೇಲೆ ಬಿದ್ದಡೆ, ಎನಗೆ ಪುಷ್ಪವೆಂಬೆನು ಚೆನ್ನಮಲ್ಲಿಕಾರ್ಜುನಯ್ಯ, ಶಿರ ಹರಿದು ಬಿದ್ದಡೆ, ಪ್ರಾಣ ನಿಮಗರ್ಪಿತವೆಂಬೆನು.

ಹಾಲ ನೇಮ, ಹಾಲ ಕೆನೆಯ ನೇಮ; ಕೆನೆ ತಪ್ಪಿದ ಬಳಿಕ ಕಿಚ್ಚಡಿಯ ನೇಮ; ಬೆಣ್ಣೆಯ ನೇಮ, ಬೆಲ್ಲದ ನೇಮ! ಅಂಬಲಿಯ ನೇಮದವರ ನಾರನೂ ಕಾಣೆ. ಕೂಡಲಸಂಗನ ಶರಣರಲ್ಲಿ ಅಂಬಲಿಯ ನೇಮದಾ ಮಾದಾರಚೆನ್ನಯ್ಯ.



## ನಿಜವನರಿದ ನಿಜಗುಣ ಶಿವಯೋಗಿ

ಸಿದ್ಧಯ್ಯ ಪುರಾಣಿಕ, ಶ್ರೀ ಗಿರಿ, 4/5ಎ, ಆಲಿ ಅಸ್ಕರ್ ರಸ್ತೆ, ಬೆಂಗಳೂರು-560052.

**ನಿರೂಪಕ:–** ನೂರಾರು ವರ್ಷಗಳಹಿಂದೆ ಹದಿಮೂರು ಹದಿನೈದನೆಯ ಶತಮಾನಗಳ ಮಧ್ಯದಲ್ಲಿ ಎಂದೋ ಒಮ್ಮೆ - ಕೊಳ್ಳೇಗಾಲ ತಾಲ್ಲೂಕಿನಲ್ಲಿರುವ ಶಂಭುಲಿಂಗನ ಬೆಟ್ಟದ ಮೆಟ್ಟಿಲುಗಳನ್ನೇರುತ್ತಲಿದ್ದ ಭವ್ಯಾತ್ಮನೊಬ್ಬ, ಅವನ ಪಾದಗಳು ಮೆಟ್ಟಿಲುಗಳನ್ನೇರುತ್ತಿದ್ದಂತೆ ಅವನ ಮಸ್ತಕದಲ್ಲಿ ಪಲ್ಲವಿಯೊಂದು ಪ್ರತಿಧ್ವನಿಸುತ್ತಲಿದ್ದಿತು-ಆರು ನಾನೆಂದು ವಿಚಾರಿಸು, ಆರು ನಾನೆಂದು ವಿಚಾರಿಸಿ ತಿಳಿಯೆ ಸಂಸಾರ ಸಾಗರವನು ತ್ತರಿಪುದರಿದೇ. ?

ಏಕೆ ಸಂಸಾರದಲ್ಲಿ ವಿರತಿ ಹುಟ್ಟಿತು ಈ ವ್ಯಕ್ತಿಗೆ ? 'ಭವಮಾಲೆಗಳಿಸು' ಎಂಬ ಶ್ರೀಗುರು ವಚನೋಪದೇಶವನಾಲಿಸಿಯೆ ? ತನುಮೋಹವಖಿಳೇಂದ್ರಿಯದ ಪರಿತಾಪ, ಧನದಾಸೆ ಸುಜನರ ನಿಂದೆಯಾಲಾಪ, ವನಿತಾಭಿರತಿ ಲೋಕಗತಿಯನು ಲೇಪಗಳು ಸಾಕಾಗಿಯೇ ? ಇಲ್ಲಿ ಕೇಳಿ:

**ಗಾಯಕ ರಾಗ–ರೇಗುಪ್ತಿ**

ನಿದ್ರೆ ಬಾರದಿದೆಯೆನ್ನ ಪರಿಭವ ದು:ಖದ 1 ಮುದ್ರವೆನಿಸುವ ಸಾಯಸವ ನೆನೆ ನೆನೆದು ‖1ಪು ಶಿ‖
ಪಾಪಾನುಗುಣದಿಂದೆ ಗಿಡಮರ ಕ್ರಿಮಿಗಳ
ರೂಪಾಗಿಕೀಟಕ ಪತಂಗಾದಿಯಾಗಿ
ಆ ಪಕ್ಷಿ ಕುಲವಾಗಿ ಮೃಗಜಾತಿಯಾಗಿ ಮೇ—
ಲಾಪಶುರೂಪಾಗಿ ಬಹುಬಾಧೆಗೇಳಿ ‖ ನಿದ್ರೆ ಬಾರದಿದೆ....
ಭೂತ ಪಂಚಕದ ರೂಪಾಗಿ ಔಷಧಿಯಾಗಿ
ಧಾತು ಸಪ್ತಕದ ರೂಪಾಗಿ ತಂದೆಯೊಳು
ಮಾತೆಯ ಸೂತಕ ರುಧಿರರರೂಪಾಗಿ ಮ—
ತ್ತೀತನುವಾಗು ವಚ್ಚರಿಯನು ಕೇಳಿ —ನಿದ್ರೆ ಬಾರದಿದೆ—
ಬಾಲಕ ತರುಣ ಜರಾಜೀರ್ಣರೂಪಾಗಿ
ಮೇಲೆ ಸರರೆಯಾಗಿ ಬಳಿಕೇ ಕ್ರಮದೊಳು
ತಾಳಲಾರೆನು ತನುವ ಶಂಭುಲಿಂಗವೆ
ಪಾಲಿಸೆಂದೆರಗಿ ಬಿನ್ನೈವ ಭೀತಿಯೊಳು —ನಿದ್ರಾ ಬಾರದಿದೆ.

**ನಿರೂಪಕ:—** ನಿದ್ರೆ ಬಾರದಾಗಿ ಎದ್ದು ಹೊರಬಿದ್ದು ಬಂದಹಾಗಿದೆ ಇವನು ಬುದ್ಧನಂತೆ. ಶಂಭುಲಿಂಗನ - ಬೆಟ್ಟದ ಸ್ವಯಂಭು ಸೌಂದರ್ಯಶ್ರೀಯ ಸಾನ್ನಿಧ್ಯದಲ್ಲಿ

ಶಾಂತಿ ದೊರೆಯಬಹುದೆಂದು, ಗುರು ಶಂಭುಲಿಂಗನ ಕರುಣದಿಂದ ನಿಜದರಿವು ದೊರೆಯಬಹುದೆಂದು ದೊರೆತನವನ್ನು ತೊರೆದು ಬಂದಂತಿದೆ ಈ ಜ್ಞಾನೋಪಾಸಕ ಸತ್ಯ ಸಾಧಕ,? ಇನ್ನಾವ ಪದವಿಯನ್ನೂ ಪಡೆಯಲೆಂದು ಬಂದಿರಲಾರ. ಅವನ ಈ ಹಾಡು ಇದಕ್ಕೆ ಸಾಕ್ಷಿ:—

**ಗಾಯಕ** **ರಾಗ—ಕಲ್ಯಾಣ**

ಬೇರೊಂದು ಪದವಿಯನು ಪಡೆವೆನೆಂಬಳಿಯಾಸೆ
ತೋರದೆನ್ನೊಳು ಗುರುವಿನೊಲುಮೆ ದೊರಕೊಳಲು ||ಪ||
ಶ್ರೀ ಗರುಪದಾಬ್ಜರೇಣು ಭಸಿತದೊಳೆನ್ನನಾ
ವಾಗಲೆಡೆವಿಡಿದ ಮಾಮಾಗ್ರಹಂ ತೊಲಗೆ
ನೀಗಿ ಜನನಾದಿ ವಿಕೃತಿಯನು ನಿಜಬೋಧರೂ-
ವಾಗಿ ಸಂತಸದೊಳಾನಿಹುಧನತಿಗಳೆದು—ಬೇರೊಂದು ಪದವಿಯನು
ಬೆಳಗುದೋರಲು ಗುರುದಯಾದಿವಾಕರನು

**ನಿರೂಪಕ:—** ಈ ಸುಗುಣ ಸಂತತಿ ಇವನದಾಗಿ 'ಶ್ರುತಿ ಬೋಧನೆಯೊಳು ಉಪರತಿಯಿಲ್ಲದ ಇರವು' ಇವನಿಗೆ ಅಳವಟ್ಟಿತು. ವೇದಾಗಮೋಪನಿಷತ್ತುಗಳ, ಪುರಾಣೇತಿಹಾಸಗಳ ಲೌಕಿಕ ಪಾರಲೌಕಿಕ ವಿದ್ಯೆ ವಿಜ್ಞಾನಗಳ ಸಾರಸರ್ವ್ವವನ್ನು ತನ್ನದಾಗಿಸಿಕೊಂಡು ಅದನ್ನು ಹಾಡುದಬ್ಬ, ತ್ರಿಪದಿ, ದ್ವಿಪದಿ, ಸಾಂಗತ್ಯ, ಕಂದ, ರಗಳೆ, ಗದ್ಯ ಮೊದಲಾದ ವಿವಿಧ ಛಂದೋರೂಪದಲ್ಲಿ, ಸಾಹಿತ್ಯ ಪ್ರಕಾರಗಳಲ್ಲಿ, ಸಹಜ ಸುಭಗ ಸುಂದರ ಶೈಲಿಯಲ್ಲಿ, ಸುಲಭ ಸುಲಲಿತ ಭಾಷೆಯಲ್ಲಿ ನಮಗಾಗಿ ನೀಡಿಹೋದ ಈ ಮಹಾಜ್ಞಾನಿ, ಮಹಾಯೋಗಿಯ ಹೆಸರು ನಿಜಗುಣಶಿವಯೋಗಿ —ನಿಜವನರಿದ, ನಿಜದಿ ಬರೆದ ನಿಜಗುಣಶಿವಯೋಗಿ. "ನಿಜ" ವೆಂಬ ಶಬ್ದ ನಿಜಗುಣಶಿವಯೋಗಿಗೆ ಅತ್ಯಂತ ಪ್ರಿಯವಾದ ಶಬ್ದ. ಅವರ ಗುರಿಗವ್ಯುವೇ, ಪಡೆದು, ಜಪಿಸಿ, ನೋಡಿ, ಕೇಳಿ, ನಿಜದೊಡಗೂಡಿ ಸುಖಿಸುವುದು. ನಿಜವನರಿದ, ನಿಜದಿ ಬೆರೆದ ಅವರಿಗೆ ನಿಜಗುಣ ಶಿವಯೋಗಿಯೆಂಬ ಹೆಸರು ಸಾರ್ಥಕ, ಅನ್ವರ್ಥಕ. ನಿಜವೆಂದರೇನು? ಅವರೇ ವಿವರಿಸಲಿ:-

**ಗಾಯಕ** **ರಾಗ—ದೇಶಿ**

ನಾವರಿದೆವರಿದೆವು ಎಂದರಿ ನಿಜವನು ಅದು ನಿಮ್ಮ
ಭಾವನೆಗೆ ಬಂದ ಪರಿಯನು ಪೇಳಿರೈ || ಪ ||
ದೇಹದಿರಿವಿನೊಳು ಸೋಜಿಗವೆನಿಸಿಹುದು ನಿಜವೊ ?
ದೇಹದೊಳಗೂಡಿ ನೋಡುವುದು ನಿಜವೊ ?
ದೇಹ ಕರಣಾದಿಗಳಿಗಾಧಾರವಾದಸು ನಿಜವೊ ?
ನಾನೆಂಬುದೆಡೆಬಿಡದೆ ಪೊರಗನರಿವುದು ನಿಜವೊ ?



ನಾನೆಂಬುದಡಗಿದಾನಂದ ನಿಜವೊ ?
ಆನಂದವನು ತೋರ್ಪುದೇನು ವಿಡಿದುದು ನಿಜವೊ ?
ಆನಂದವೆಂಬುದಡಗಿದ ನಿಲವೆ ನಿಜವೊ ?
ಸಗುಣ ನಿರ್ಗುಣ ತತ್ವ ತಾನೆ ನಿಜವೊ ?
ಸಗುಣ ನಿರ್ಗುಣವನಚ್ಚಳಿದ ಪದವದು ನಿಜವೊ ?
ಬಗೆಯ ಕುರುಪಿನ ಕಲಾಬಿಂದು ನಾದವೆ ನಿಜವೊ ?
ಬಗೆಯ ಬಣ್ಣಕೆ ಬಾರದಿಹುದೆ ನಿಜವೊ ?
ಜಗದ ನಾನಾತ್ಮದೊಡನಗಲದ್ದಿರ್ಪುದೆ ನಿಜವೊ ?
ಮುಗುಳೆಯಾಜಗಕನ್ಯವಹುದು ನಿಜವೊ ?

ನಿರೂಪಕ :— ಇದಾವುದೂ ನಿಜವಲ್ಲ ನಿಜಗುಣರ ದೃಷ್ಟಿಯಲ್ಲಿ ನಿಜವಾವುದು ಹಾಗಾದರೆ ?

ಗಾಯಕ:- ಫಲವು ಮತಭೇದವಾದವನುಳಿದು, ಸಂಶಯದ
ಹೊಲಬೆಲ್ಲದಾನು ನೀನೆಂಬುದಳಿದು
ಸಲೆನೇಮ ಸೀಮೆದೋರದ ಶಂಬುಲಿಂಗ
ವಾದುಳುಮೆ ಚಿನ್ಮಾತ್ರವದು ನಿಜ ಕಾಣಿರೈ.

ನಿರೂಪಕ:- ಎಲ್ಲ ಅಳಿದಮೇಲೂ ಉಳಿದ ಉಳುವೆಯೊಂದಿದೆ. ಅದೊಂದೇ ನಿಜ, ಅದನ್ನರಿಯುವದು ಅದರಲ್ಲಿ ಬೆರೆಯುವದು ಗುರಿಗಳಲ್ಲಿ ಗುರಿ ಅರಿವಿನ ದಾರಿಯಿಂದಲೇ ಈ ಗುರಿ ಮುಟ್ಟಬೇಕು. ಯಾಕೆ ? ಬೇರೆ ದಾರಿಗಳಿಲ್ಲವೇ ? ಇವೆ, ಆದರೆ ಅರಿವಿನ ದಾರಿಯ ಹಿರಿಮೆ ಹೀಗಿದೆ:—

ಗಾಯಕ ರಾಗ-ಭೈರವಿ

ತಿಳಿವುದೀಪದಿಯೊಳು ಮುಕುತಿದೊರೆವುದಂ-
ದೆಳಸಿ ನಿಗಮನಿಷ್ಮರೆನಿಪ ಯೋಗಿಗಳು
ಜ್ಞಾನದಿಂದೆ ಮರವೆಯಳಿವುದು, ಮರವೆಯ
ಹಾನಿಯಿಂದ ಭೇದ ಬುದ್ಧಿ ಕೆಡುವುದು, ಕೆಡಲು
ಹಾನೋಪದಾನುಳ್ಳ ವಿಷಯವದಿದೆಂಬ
ಮಾನಸ ವಿಕೃತಿ ಪೋಪುದು, ಪೋಗಲೊಡನೆ
ರಾಗ ವೈರಾಗದರಿವು ತೊಲಗಿ, ಮಾಡಲಹು-
ದಾಗದೆಂಬ ವಿಧಿನಾಶವದು, ನಾಶವೆನಿಸೆ
ಬೇಗ ಪುಣ್ಯಪಾಪ ಕರ್ಮ ವಿಲಯವದು

ಪಿಂಗಲಾಗಿ ದೇಹಭಾವನಷ್ಟವದರ ಸಷ್ಟದೊಳು
ಮತ್ತೆ ಸಂಸ್ಕೃತಿಗೆ ನಿರಾಕರಣವಹುದು, ಮೇ-
ಲುತ್ತಮ ಸಹಜವೆನಿಪಾವಸ್ಥೆ, ಬಳಿಕಾ
ಬಿತ್ತರಿಸಲರಿದಾಡ ಸುಖವೆ ನಲೆನೆಲ-
ಸಿತ್ತದೀಗ ಶುಂಭುಲಿಂಗವಾಗಿ ತಾನಿರ್ಪಿರವು ॥

ನಿರೂಪಕ:- ಆದುದರಿಂದ, ನಂಬು ಜ್ಞಾನವನ್ನೆ, ಕರ್ಮವೆಂಬ ಜಾಲದೊಳು ಸಿಲ್ಕ ಹಂಬಲಿಸದಿರು....ಎಂದರೆ ಎಲ್ಲ ಬಿಟ್ಟು ಜ್ಞಾನೋಪಾಸನೆ ಮಾಡುತ್ತ ಕುಳಿತುಬಿಡುವುದೆ? ಇಲ್ಲ, ಅಲ್ಲ, ತನುವು ದಂಡಿಸಬೇಡ, ಮನವ ನಿಲ್ಲಿಸಬೇಡ, ಧನವ ನೀಗಿರಬೇಡ, ಮನೆ ಮಾರುತೊರೆದು ವನವಾಸಬೇಡ, ನಿನಗಿನಿತು ತತ್ತ್ವಜ್ಞಾನ ಸಂಜನಿಸಲಕವೆಲ್ಲವನು ಕೆಡಿಪುದರಿಂದೆ, ಇನಿಸು ತತ್ತ್ವಜ್ಞಾನ ಸಾಕು. ಅದನ್ನು ಗಳಿಸಲು ಲೌಕಿಕವನ್ನು ಬಿಡಬೇಕಿಲ್ಲ. ಲೌಕಿಕ ಪಾರಮಾರ್ಥಗಳನ್ನು ಕೂಡಿ ನಡಸುವವನೇ ಜಾಣನು.

ಗಾಯಕ ರಾಗ-ದೇಶಿ

ಜಾಣನು ಲೌಕಿಕ ಪಾರಮಾರ್ಥವೆರಡನು
ಪೂಣದೆ ಕೂಡ ನಡಸುತಿಹನಿಂತು ॥
ತರುಣಿಯ ಮೊಲೆಯೊಂದನುಣುತಲಣುಗನನ್ಯ
ಕರದೊಳುಳಿದ ಕುಚಾಗ್ರವನೋವುವಂತೆ
ನರಜನ್ಮವಿಡಿದಿಹ ಭೋಗಾನುಭವದೊಳು
ಪರಲೋಕಗತಿಯ ಸಾಧನದೊಳಿರಾಂದಿಹನು ॥
ಜಳವನು ಮಿಕ್ಕ ಮೆಯೊಳು ಕಾಣ್ಣನಂತೆ
ತಿಳಿವಿನ ಸುಖವನು ವಿಷಯಬಾಧೆಯನು ಸಂ-
ಗೊಳಿಸುವಂತೆ ಸಮಯವೊಂದರೊಳೈಯ್ದುತಿಹನು ॥
ಪರನ ಸಂಗದ ಸೊಗಪನು ಮರೆಯದೆ ನಿಜ
ಪುರುಷನೊಳೊಂದುವ ಪುಂಶ್ಚಲಿಯಂತೆ
ಗುರುಶಂಭುಲಿಂಗದ ನೆನಹು ನೆಲಸಿ ಬಾಹ್ಯ
ಪರಿಕರದಭಿರತಿಯನು ನಿಂಗದಿಹನು ॥



ನಿರೂಪಕ:- ಹೀಗೆ, 'ಪರವು ವಿವೇಕಿಗಳೊಲಿದೊಡಂಬಡುವಂತೆ, ಪರತತ್ತ್ವ ಬೋಧೆಯ ಮೃತದ ಸರಿಸುರಿವಂತೆ, ಕೇಳ್ವರ ಕರ್ಣದೊಳು ಇದನೊರೆವೆ ನಾನು ಪನಿಷನ್ಮತದಿಂದ' ಎಂದು ಅವರೇ ತಮ್ಮ "ಪರಮಾನುಭವ ಬೋಧೆ"ಯಲ್ಲಿ ಹೇಳಿರುವಂತೆ ಕೇಳ್ವರ ಕರ್ಣಗಳಲ್ಲಿ ಪರತತ್ವ ಬೋಧೆಯ ಅಮೃತದ ಸರಿ ಸುರಿಯುವ ಹಾಗೆ ಕೃತಿಗಳನ್ನು ರಚಿಸ ತೊಡಗಿದರು ನಿಜಗುಣರು. ಉಪನಿಷನ್ಮತದ ತಿರುಳಾದ "ಪರಮಾನುಭವ ಬೋಧೆ" ಯೋಗವಾಶಿಷ್ಠಾದಿಗಳಲ್ಲಿ ಹೇಳಿದ ತತ್ತ್ವಾರ್ಥದ ತಿರುಳಾದ ಪರಮಾರ್ಥಗೀತೆ" "ವೇದಾಂತದೊಳು ಗೋಪ್ಯವಾದರ್ಥಮಂ ತ್ರಿವಿಧಿ" ಗೊಳಿಸಿರುವ 'ಅನುಭವಸಾರ' ಯೊಗಶಾಸ್ತ್ರದ ಸಾರಸಂಗ್ರಹದಂತಿರುವ ಪಾರಮಾರ್ಥ ಪ್ರಕಾಶಿಕೆ, ಕನ್ನಡದ ಮೊದಲನೆಯ ಮತಾತೀತವಾದ ಸಕಲಜ್ಞಾನಕೋಶವೆನಿಸಿರುವ 'ವಿವೇಕಚಿಂತಾಮಣಿ' ಹೃದಯಂಗಮವಾದ ಹಾಡುಗಬ್ಬಗಳ ಸಂಕಲನವಾದ 'ಕೈವಲ್ಯಪದ್ಧತಿ' 'ಅರವತ್ತುಮೂರು ಪುರಾತನರ ತ್ರಿವಿಧಿ' ಈ ಏಳು ಕನ್ನಡ ಕೃತಿಗಸನ್ನಲ್ಲದೆ, 'ಅತ್ಮತರ್ಕ ಚಿಂತಾಮಣಿ' ಮತ್ತು 'ದರ್ಶನಸಾರಂ' ಎಂಬೆರಡು ಸಂಸ್ಕೃತ ಕೃತಿಗಳನ್ನೂ ರಚಿಸಿದ್ದಾರೆ ನಿಜಗುಣರು. ಆದರೆ ಅವರ ಈ ಎರಡೂ ಸಂಸ್ಕೃತ ಕೃತಿಗಳೂ ನಮ್ಮ ಪಾಲಿಗೆ ಇಲ್ಲವಾಗಿರುವುದು ವಿಷಾದದ ಸಂಗತಿ. ಈ ಎರಡು ಕೃತಿಗಳಲ್ಲೆ ಇನ್ನೆಷ್ಟು ಜ್ಞಾನರಾಶಿಯನ್ನು ಸೂರೆಮಾಡಿದ್ದರೋ ನಿರುಪಮಜ್ಞಾನಿ ನಿಜಗುಣ ಶಿವಯೋಗಿಗಳು, ಈ ಜ್ಞಾನರಾಶಿ ಸುಲಭವಾಗಿ ಪಡೆದುದಲ್ಲ. ತ್ರಿವಿಧ ತಪಸ್ಸು ಮಾಡಿ ಪಡೆದುದು ಎಂಥ ತಪಸ್ಸು ?ಅವರೇ ಹೇಳಲಿ. ○

# ನರ್ಮದಾ ಕಣಿವೆಯಲ್ಲೊಂದು ನರಕದ ನಿರ್ಮಾಣ

ಟಿ.ಆರ್. ಚಂದ್ರಶೇಖರ್, ಉಪನ್ಯಾಸಕರು, ವಿಜಯನಗರ ಕಾಲೇಜ್, ಹೊಸಪೇಟೆ-58320

ನರ್ಮದಾ ಕಣಿವೆ ನೀರಾವರಿಯೋಜನೆ ಬಗ್ಗೆ ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆ [I.I.sc] ನಡೆಸಿದ ಅಧ್ಯಯನವು ನರ್ಮದಾಕಣಿವೆಯಲ್ಲಿನ ನೀರಾವರಿ ಪ್ರದೇಶದಲ್ಲಿ ಒಂದುಲಕ್ಷ ಹೆಕ್ಟೇರ್ ಭೂಮಿ ಸವುಳು ಮತ್ತು ಜೌಗು ಸಮಸ್ಯೆಗೆ ಈಡಾಗುತ್ತದೆ ಎಂಬುದನ್ನು ಎತ್ತಿ ತೋರಿಸಿದೆ. ಕೃಷಿ ವಿಜ್ಞಾನಿಗಳು ನರ್ಮದಾಕಣಿವೆಯಲ್ಲಿನ ಭೂಮಿಯ ನೀರಾವರಿಗೊಳಪಡಿಸುವುದರ ವಿರುದ್ಧ ಸರ್ಕಾರವನ್ನು ಎಚ್ಚರಿಸಿದ್ದಾರೆ. ಭಾರತೀಯವಿಜ್ಞಾನಸಂಸ್ಥೆ ನಡೆಸಿದೆ ಅಧ್ಯಯನವು ಹಲವು ಲೋಪ-ದೋಷಗಳಿಂದಕೂಡಿದೆ ಎಂದೂ ಮತ್ತು ವಾಸ್ತವಿಕವಾಗಿ ನರ್ಮದಾಕಣಿವೆಯಲ್ಲಿ ಸವುಳು ಮತ್ತು ಜಾಗು ಸಮಸ್ಯೆಗೆ ತುತ್ತಾಗುವ ಪ್ರದೇಶವು ಅಧ್ಯಯನ ತೋರಿಸಿರುವ ಪ್ರಮಾಣಕ್ಕಿಂತಲೂ ಹೆಚ್ಚಿದೆ ಎಂದೂ ಕೆಲವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಹೀಗೆ ಈ ಯೋಜನೆಗಳು ಒಂದುಕಡೆ ಫಲವತ್ತಾದ ಭೂಮಿಯನ್ನು ಮುಳುಗಡೆ ಗೊಳಿಸಿದರೆ ಇನ್ನೊಂದುಕಡೆ ಫಲವತ್ತಾದ ಭೂಮಿಯನ್ನು ಸವುಳು ಮತ್ತು ಜಾಗು ಮಾಡುತ್ತಿವೆ.

## ಭೂಕಂಪದ ಅಪಾಯ

ನೀರಾವರಿ ಯೋಜನೆಗಳು ಭೂಕಂಪದ ಅಪಾಯವನ್ನು ಉಂಟುಮಾಡುತ್ತವೆ ಎಂಬ ವೈಜ್ಞಾನಿಕ ಅನುಮಾನವೊಂದಿದೆ, ಮೇಲಾಗಿ ನರ್ಮದಾ ಕಣಿವೆಯು ಭೂಕಂಪ ವಲಯದಲ್ಲಿದೆ ಎನ್ನಲಾಗಿದೆ. ಕಳೆದ 200 ವರ್ಷಗಳಲ್ಲಿ ನರ್ಮದಾಕಣಿವೆಯಲ್ಲಿ 30 ಭೂಕಂಪಗಳಾಗಿವೆ. 1938 ರಲ್ಲಿ ಸಂಭವಿಸಿದ 6.3 ಪ್ರಮಾಣದ ಭೂಕಂಪವೆ ಅತಿದೊಡ್ಡದು, ಅಪಾರ ನೀರು ಸಂಗ್ರಹ ಮಾಡುವ ಅಣೆಕಟ್ಟೆಗಳು ಭೂಕಂಪದ ಅಪಾಯವನ್ನು ಹೆಚ್ಚಿಸುತ್ತವೆಯೊ ಇಲ್ಲವೊ ಎಂಬುದರ ಬಗ್ಗೆ ದೇಶಾದ್ಯಂತ ಅಧ್ಯಯನಗಳು ನಡೆದಿವೆ, ಇದರಬಗ್ಗೆ ಸ್ಪಷ್ಟ ತೀರ್ಮಾನ ಇನ್ನೂ ಸಾಧ್ಯವಾಗಿಲ್ಲ.

ಆದರೆ ನರ್ಮದಾ ಕಣಿವೆಯು ಭೂಕಂಪದ ಕಕ್ಷೆಯಲ್ಲಿವೆ ಎಂಬುದು ಭೂಕಂಪ ಶಾಸ್ತ್ರಜ್ಞರ ಅಭಿಮತ. ಇದನ್ನು ಪರಿಗಣಿಸಿಯೆ ಭೂಕಂಪದ ಅಪಾಯವನ್ನು ಎದುರಿಸುವಂತೆ ಅಣೆಕಟ್ಟೆಗಳನ್ನು ನಿರ್ಮಿಸಲಾಗುತ್ತಿದೆ ಎಂದು ಸರ್ಕಾರ ಹೇಳುತ್ತಿದೆ. ಆದರೆ ಸರ್ಕಾರದ ಯೋಜನೆಗಳಲ್ಲಿ ಅಣೆಕಟ್ಟೆಗಳ ಸಃಹದ್ದಿನಲ್ಲಿ ಬದುಕುವ ಜನರಿಗೆ ಭೂಕಂಪದ ಸಮಯದಲ್ಲಿ ನೀಡುವ ರಕ್ಷಣೆ ಬಗ್ಗೆ ಯಾವುದೇ ಸೂಚನೆ ಇಲ್ಲ, 1967 ರಲ್ಲಿ ಕೊಯ್ನಾದಲ್ಲಿ ಸಂಭವಿಸಿದ ಭೂಕಂಪದಿಂದ ಸುಮಾರು 200ಜನ ಸಾವಿಗೀಡಾದರು ಮತ್ತು ಸಾವಿರಾರು ಜನರ ವಸತಿಗಳು ನೆಲಸಮವಾದವು. ಇದಕ್ಕೆ ಕೊಯ್ನಾ ಅಣೆಕಟ್ಟೆಯಲ್ಲಿ ಸಂಗ್ರಹವಾದ ಅಪಾರ ನೀರು ಭೂಮಿಯ ಮೇಲೆ ಉಂಟುಮಾಡಿದ ಒತ್ತಡದಿಂದ ಉಂಟಾದುದು ಎನ್ನಲಾಗಿದೆ, ಇಂತಹ ಅನಾಹುತಗಳು ನರ್ಮದಾ ಕಣಿವೆಯಲ್ಲಿ ಸಂಭವಿಸಲಾರವು ಎಂಬುದಕ್ಕೆ ಆಧಾರ ಏನಿದೆ?



## ಆಕಾಶ ದೆತ್ತರ ನಿರ್ಮಾಣವೆಚ್ಚ

ಪ್ರತಿ ಹೆಕ್ಟೇರ್ ಭೂಮಿಗೆ ನೀರಾವರಿ ಸೌಲಭ್ಯ ಒದಗಿಸಲು ತಗಲುವ ವೆಚ್ಚ 1950-51 ರಿಂದಲೂ ಏರುತ್ತಲೆ ನಡೆದಿದೆ. ಮೊದಲನೆಯ ಪಂಚವಾರ್ಷಿಕ ಯೋಜನೆಯಲ್ಲಿ ಸರಾಸರಿ ಪ್ರತಿ ಹೆಕ್ಟೇರ್ ನೀರಾವರಿ ವೆಚ್ಚ ರೂ 1520 ಇತ್ತು. ಏಳನೆ ಪಂಚವಾರ್ಷಿಕ ಯೋಜನೆಯಲ್ಲಿ (1985-1990) ಇದು ರೂ 26,873 ಎಂದು ಅಂದಾಜು ಮಾಡಲಾಗಿದೆ. ಈ ನಿರ್ಮಾಣ ವೆಚ್ಚಕ್ಕೆ ಸ್ಥಳಾಂತರಗೊಂಡ ಜನರ ಪುನರ್‌ವಸತಿ ವೆಚ್ಚವನ್ನು ಸೇರಿಸಿದರೆ ಇದು ಮತ್ತಷ್ಟು ಹೆಚ್ಚಾಗುತ್ತದೆ. ಈಎಲ್ಲಾ ಆರ್ಥಿಕ ವೆಚ್ಚದ ಜೊತೆ ಪರಿಸರ ವೆಚ್ಚವನ್ನು ಸೇರಿಸಿದರೆ ನೀರಾವರಿ ವೆಚ್ಚದ ಪ್ರಮಾಣ ಆಕಾಶದೆತ್ತರಕ್ಕೆ ಏರುವುದರಲ್ಲಿ ಯಾವ ಸಂಶಯವೂ ಬೇಕಾಗಿಲ್ಲ. ಕೇಂದ್ರ ಸರ್ಕಾರದ ಪರಿಸರಮಂತ್ರಿ ಶಾಖೆ ನಡೆಸಿದ ಅಧ್ಯಯನವು ನರ್ಮದಾಕಣಿವೆ ನೀರಾವರಿ ಯೋಜನೆಗೆ ತಗುಲುವ ಪರಿಸರ ವೆಚ್ಚ ಸುಮಾರು ರೂ40,000 ಕೋಟಿ ಎನ್ನಲಾಗಿದೆ.

ಇಷ್ಟೆಲ್ಲಾ ವೆಚ್ಚಕ್ಕೆ ಕಣಿವೆಯ ಜನತೆ ಅನುಭವಿಸುವ ಮಾನಸಿಕ ಮತ್ತು ಸಾಂಸ್ಕೃತಿಕ ಶಾಕ್‌ಅನ್ನು ಸೇರಿಸಿದರೆ ತಲೆತಿರುಗುವಂತಾಗುತ್ತದೆ. ಇಷ್ಟೊಂದು ಪ್ರಮಾಣದಲ್ಲಿ ನಡೆಯುವ ವೆಚ್ಚಕ್ಕೆ ಬರಬಹುದಾದ ಪ್ರತಿಫಲ ಆಶಾದಾಯಕವಾಗೇನು ಇಲ್ಲ. ನರ್ಮದಾ ಕಣಿವೆಯ ನೀರಾವರಿ ಯೋಜನೆಗಳ ವೆಚ್ಚ ಪ್ರತಿಫಲ ಪರಿಮಾಣ 1.5 ಎಂದು ಸರ್ಕಾರ ಅಂದಾಜುಮಾಡಿದೆ. ಅಂದರೆ ಯೋಜನೆಯಮೇಲೆ ವಿನಿಯೋಗಿಸುವ ಪ್ರತಿ ರೂಪಾಯಿ ವೆಚ್ಚಕ್ಕೆ ಬರುವ ಪ್ರತಿಫಲ ಒಂದೂವರೆ ರೂಪಾಯಿಯಷ್ಟು ಎಂದಾಯಿತು. ಆದರೆ ಇದೆಲ್ಲಾ ಯೋಜನೆ ಪ್ರವೃತ್ತಿಗಳು ನಡೆಸಿರುವ ಅಂಕಿ-ಸಂಖ್ಯೆಗಳ ದೊಂಬರಾಟವಾಗಿದೆ. ಈ 'ವೆಚ್ಚ-ಪ್ರತಿಫಲ' ಲೆಕ್ಕಾಚಾರದಲ್ಲಿ ಪರಿಸರವೆಚ್ಚವನ್ನು ಪರಿಗಣಿಸಿಲ್ಲ. ಈ ಲೆಕ್ಕಾಚಾರದಲ್ಲಿ ವೆಚ್ಚವನ್ನು ಉದ್ದೇಶಪೂರ್ವಕವಾಗಿ ಕೆಳಮಟ್ಟದಲ್ಲಿಟು ಪ್ರತಿಫಲವನ್ನು ಕೃತಕವಾಗಿ ಬಲೂನಿನಂತೆ ಊದಿಸಲಾಗಿದೆ, ವಾಸ್ತವಿಕವಾಗಿ ಈಯೋಜನೆಗಳ 'ವೆಚ್ಚ-ಪ್ರತಿಫಲ' ಪರಿಮಾಣ ಕೇವಲ 0.11. ಇದರಿಂದ ನರ್ಮದಾ ಕಣಿವೆನೀರಾವರಿ ಯೋಜನೆ ಸೃಷ್ಟಿಸುವ ಸಂಪತ್ತಿಗಿಂತ ಸೂರೆಗೊಳ್ಳುವ ಸಂಪತ್ತು ಅಧಿಕ ಎಂಬುದು ಸ್ಪಷ್ಟ ವಾಗುತ್ತದೆ. ಇದು ನರಕವಲ್ಲದಿದ್ದರೆ ಮತ್ತಾವುದು ನರಕ! ಇಂತಹ ಘೋರನರಕದ ಸೃಷ್ಟಿಗೆ ಸರ್ಕಾರ ಏನೆಲ್ಲಾ ಕಸರತ್ತು ನಡೆಸಿದೆ! ಇಂತಹನರಕದ ನಿರ್ಮಾಣವನ್ನು ನಾವು ಸ್ವಾಗತಿಸಬೇಕೆ! ಈ ನರಕದ ನಿರ್ಮಾಣವನ್ನು ತಡೆಯುವುದರ ಮೂಲಕ ನಾವು ಸ್ವರ್ಗಸಮಾನವಾದ ನರ್ಮದಾ ಕಣಿವೆಯನ್ನು, ದಟ್ಟವಾದ ನಿತ್ಯಹರಿದ್ವರ್ಣ ಕಾಡುಗಳನ್ನು ಅಮೂಲ್ಯ ವನ್ಯಪ್ರಾಣಿ ಮತ್ತು ಸಸ್ಯರಾಶಿಯನ್ನು, ಫಲವತ್ತಾದ ಭೂಮಿಯನ್ನು ರಕ್ಷಿಸಬಹುದಾಗಿದೆ.

## ನರ್ಮದಾ ಕಣಿವೆ ನೀರಾವರಿ ಯೋಜನೆ-ಒಂದು ಪಕ್ಷಿನೋಟ.

| | |
|---|---|
| 1. ಅಣೆಕಟ್ಟುಗಳ ಸಂಖ್ಯೆ | ಅ) 30 ಬೃಹತ್ ನೀರಾವರಿ ಯೋಜನೆಗಳು<br>ಆ) 135 ಮಧ್ಯಮ ಗಾತ್ರದ ಯೋಜನೆಗಳು<br>ಇ) 3000 ಸಣ್ಣ ನೀರಾವರಿ ಯೋಜನೆಗಳು |
| 2. ನಿರ್ಮಾಣ ವೆಚ್ಚ | ರೂ. 25,000 ಕೋಟಿ (ಅಧಿಕೃತ ಅಂಧಾಜು ದೊರೆಯುತ್ತಿಲ್ಲ.) |
| 3. ಪ್ರತಿಫಲ | ನೀರಾವರಿ 48ಲಕ್ಷ ಹೆಕ್ಟೇರ್<br>ವಿದ್ಯುತ್ 2700 ಮೆ. ವಾ.<br>ನೆರೆ ನಿಯಂತ್ರಣ, ಮೀನುಗಾರಿಕೆ,<br>ಪ್ರವಾಸೋದ್ಯಮ-ಇತರೆ<br>ಉದ್ದೇಶಗಳೂ ಇವೆ. |
| 4. ಮುಳಗಡೆ ಪ್ರದೇಶ | 6ಲಕ್ಷ ಹೆಕ್ಟೇರ್<br>3.5ಲಕ್ಷ ಹೆಕ್ಟೇರ್ ಅರಣ್ಯ. |
| 5. ನೆಲೆ ಕಳೆದುಕೊಳ್ಳುವ ಜನರ ಸಂಖ್ಯೆ | 10 ಲಕ್ಷ |
| 6. ಪರಿಸರ ವೆಚ್ಚ (ಹಾನಿ) | ರೂ 40,090 ಕೋಟಿ. |
| | (ವಿವಿಧ ಮೂಲಗಳಿಂದ) |



## ಬಸವತತ್ತ್ವ ರತ್ನಾಕರ-14.

ಶ್ರೀ ಮೋಟಗಿ ಮಲ್ಲಿಕಾರ್ಜುನ "ಕನ್ನಡ ಕವಿಕಾಳಿದಾಸ" ಅಥಣಿ. (ಬೆಳಗಾವಿಜಿಲ್ಲೆ)

### ಭಕ್ತಿರಹಸ್ಯ:— [136]

"ತನ್ನತಾನರ್ಪಿಸಿಕೊಂಬ ಭಕ್ತಿಯೆ
ನಮ್ಮ ಬಸವಣ್ಣನಾ ಭಕ್ತಿರಹಸ್ಯ ತಿಳಿಯಿರಯ್ಯಾ.
ಅಲ್ಲಿ ಸೇವ್ಯ-ಸೇವಕ, ಪೂಜ್ಯ-ಪೂಜಕ ಎಂಬ ಭಾವವಿಲ್ಲವಯ್ಯಾ.
ವ್ಯಷ್ಟಿ-ಸಮಷ್ಟಿ, ಅಂಗ-ಲಿಂಗ ಎಲ್ಲ ಒಂದೇ, ಸ್ವಲೀಲೆಯಿಂದ
ಎರಡಾದ ಲಿಂಗ ಅಂಗವಾಗಿ ಪೂಜಿಸುತ್ತಿದೆ ನೋಡಿರಯ್ಯಾ.
ಲಿಂಗವಾಗಿ ಪೂಜೆಗೊಳ್ಳುತ್ತಿದೆ ನೋಡಿರಯ್ಯಾ.
ಹೀಗಿರುವಲ್ಲಿ ದ್ವೈತಕ್ಕೆ ಎಡೆಯೆಲ್ಲಿ? ಹೇಳಿರಯ್ಯಾ.
ಸೇವ್ಯ-ಸೇವಕ, ಪೂಜ್ಯ-ಪೂಜಕ ಭಾವಗಳಿಲ್ಲವಾಗಿ
ತನ್ನತಾಪೂಜಿಸಿಕೊಂಬುದು ಎರಡಿಲ್ಲದ ಭಕ್ತಿಯೆನಿಸಿ,
ಈ ಭಕ್ತಿಯೆ ಮುಕ್ತಿಪದವಾಯಿತ್ತು-ಕಾಣಿರಯ್ಯ.
ಶ್ರೀ ಶೈಲಮಲ್ಲಿಕಾರ್ಜುನ!"

### ಕಲ್ಯಾಣಕೈಲಾಸವಾಯಿತ್ತು:— [137]

"ಗುರುಮೂರ್ತಿ ನಮ್ಮ ಬಸವಣ್ಣ.
ಲಿಂಗಮೂರ್ತಿ ನಮ್ಮ ಬಸವಣ್ಣ.
ಜಂಗಮಮೂರ್ತಿ ನಮ್ಮ ಬಸವಣ್ಣ.
ಭಕ್ತಮೂರ್ತಿ ನಮ್ಮ ಬಸವಣ್ಣ.
ಪಂಚಪುರುಷಹಸ್ತಮೂರ್ತಿ ನಮ್ಮ ಬಸವಣ್ಣ.
ಷಟ್‌ಸ್ಥಲ ಜ್ಞಾನಮೂರ್ತಿ ನಮ್ಮ ಬಸವಣ್ಣ.
ಇಂತೀಸಕಳ ಕುಳ ಸ್ಥಳಂಗಳ ಕಾರಣಮೂರ್ತಿ ನಮ್ಮ ಬಸವಣ್ಣ
ಬಸವಣ್ಣನಿಂದ ಕಲ್ಯಾಣ ಕೈಲಾಸವಾಯಿತ್ತು ನೋಡಾ!
ಅಲ್ಲಿ ನಿತ್ಯ ಲಕ್ಷದಮೇಲೆ ತೊಂಬತ್ತಾರು ಸಾವಿರ
ಗಣಂಗಳ ಪ್ರಸಾದ ತೃಪ್ತಿ ನಡೆಯುತ್ತಿದ್ದಿತು ನೋಡಾ!
ಆದಿ "ಶ್ರೀಗುರುಬಸವಲಿಂಗಾಯನಮಃ" ಎಂಬೀ
ಮಂತ್ರವಾಕ್ಯವುಂಟೆಂಬುದನು ನೀವು ಅರಿಯಿರಯ್ಯ!
ಈರೇಳು ಲೋಕಂಗಳುತ್ಪತ್ತಿಲಯಕ್ಕೆ ನಮ್ಮೀಅನಾದಿ ಪುರಾತ
ಬಸವಣ್ಣನೆ ಕಾರಣಕರ್ತನೆನಿಸಿ ವಿಭುವಾಗಿ ಬೆಳಗುತಿರ್ದನುನೋಡಾ!

ಇಂತೆಂಬ ಪ್ರಭುದೇವನಾ ಪ್ರಮಾಣವಾಣಿಯ ಕೇಳಿ,
ತಿಳಿದು ನಡೆವ ಭಕ್ತಂಗೆ ಲಿಂಗಯೋಗಮಯ
ಮೋಕ್ಷ ಕರತಲಾಮಲಕವಾಯಿತ್ತು ! ಇದು ಪರಮಸತ್ಯವಾಣಿ !
ಕಾಣಾ, ಶ್ರೀಶೈಲಮಲ್ಲಿಕಾರ್ಜುನ."

ಟೀ: A. "ನನ್ನಂಥವರು ನೂರಾರು ಜನ ಸಾಯಲಿ ಆದರೆ ಸತ್ಯಕ್ಕೆ ಜಯವಾಗಲೆ ! "
—ಮಹಾತ್ಮಾಗಾಂಧೀಜೀ

### ಗುರುಲಿಂಗಜಂಗಮತತ್ತ್ವವಿವರಣೆ:— [138]

"ಭಕ್ತನೆ-ಮಹೇಶನಾಗಿ ಗುರುವೆನಿಸಿರ್ದ ನೋಡಾ.
ಗುರುಸ್ಥಲವಿವರ: ಗುರುಪದ ವಾಚ್ಯಾರ್ಥ-ಪೂಜ್ಯತೆಯ-
ದ್ಯೋತಕವಲ್ಲದೆ ಜಾತಿವರ್ಗಸೂಚಕವಲ್ಲವಯ್ಯ !
ಲಿಂಸ್ಥಲವಿವರ: ಭಕ್ತನೆ-ಪ್ರಸಾದಿ ಪ್ರಾಣಲಿಂಗಿಯಾಗಿ
ಲಿಂಗವೆನಿಸಿರ್ಪ ನೋಡಾ !
ಜಂಗಮಸ್ಥಲವಿವರ: ಭಕ್ತನೆ ಶರಣ-ಐಕ್ಯನಾಗಿ
ಜಂಗಮನೆನಿಸಿರ್ದ ನೋಡಾ !
ಶಿವರಹಸ್ಯವೆಂತೆಂದಡೆ: ಶಿವಶಕ್ತಿಯೆ ಭಕ್ತಿಯಾಗಿ ಪರಿಣಮಿಸಿ
ಭೂಮಿಗವತರಿಸಿ ಭಕ್ತನೆನಿಸಿತ್ತು ನೋಡಾ !
ಏಕೈಕ ಶಿವಶಕ್ತಿರೂಪಾಗಿಪ್ಪ ಭಕ್ತನು ಭಕ್ತಿಬಳಿವಿಡಿದು
ಶಿವಾಚಾರ ಸಂಪನ್ನನಾಗಿ ಷಟ್‌ಸ್ಥಲವನೈದಿದಡು
ತಾ ಭಕ್ತಸ್ಥಲದೊಳು ಚರಿಸುತಿಪ್ಪ ನೋಡಾ !
ಇಂತಪ್ಪ ಭಕ್ತನೆ ಗುರು-ಲಿಂಗ-ಜಂಗಮವಾಗಿ
ಮೆರೆಯುತಿಪ್ಪ ನೋಡಾ !
ಶ್ರೀ ಶೈಲಮಲ್ಲಿಕಾರ್ಜುನ. "

### ಲಿಂಗತತ್ವರಹಸ್ಯ-139.

"ಪರಶಿವನ ಕುರುಹು ಆದ ಇಷ್ಟಲಿಂಗವನು
ಭಕ್ತಿಯಿಂ ಅಂಗದೊಳು ಧರಿಸಿ (ಲಿಂಗಾಯತ) ವೀರಶೈವ ಭಕ್ತನಾದ!
ಈಲಿಂಗಾಂಗ ಸಾಮರಸ್ಯ ಜ್ಞಾನಿಯಾದ, ಷಟ್‌ಸ್ಥಲಾಚರಣೆಯಿಂ
ಕಂಗೊಳಿಪ ಮಹಾನುಭಾವಿ ಸದ್ಭಕ್ತನೆ ಗುರುವೆನಿಸಿ,
ಶಿಷ್ಯಂಗೆ ಲಿಂಗಧಾರಣ ಮಂತ್ರೋಪದೇಶಮಾಡಿ ಗುರುವಾದ !
ಈ ಮಹಾಜ್ಞಾನಿಯಾದ ಭಕ್ತನೆ ನಿರಂಜನನಾಗಿ,
ಭೂಮಿಗೆ ಭಕ್ತಿ ಬೀಜವ ಬಿತ್ತಿ ಚರಿಸಿ ಜಂಗಮನಾದ !
ಇಂತು ಅಷ್ಟಾವರಣ-ಪಂಚಾಚಾರ-ಷಡುಸ್ಥಲನ ನೊಳಗೊಂಡ



ಶಿವಧ್ಯಾನ-ಶಿವಭಕ್ತಿ-ಶಿವಜ್ಞಾನಯುಕ್ತವಾದ
ಇಷ್ಟ-ಪ್ರಾಣ-ಭಾವಲಿಂಗ ಸಾಹಿತ್ಯವೆ,
"ಲಿಂಗತತ್ತ್ವರಹಸ್ಯ" ವಾಗಿಪ್ಪುದು ಕೇಳಾ, ಶ್ರೀ ಶೈಲಮಲ್ಲಿಕಾರ್ಜುನ"!

### ಭಕ್ತತತ್ತ್ವವ್ಯಾಖ್ಯೆ 140.

"ಭಕ್ತ-ವಿರಕ್ತ-ಸ್ವಾಮಿ-ಗುರು-ಜಂಗಮ ಇತ್ಯಾದಿ
ನಾಮಪದಂಗಳು ಕುಲ-ಜಾತಿ, ಮೇಲು-ಕೀಳು-
ವರ್ಗ ಸೂಚಕಗಳಲ್ಲ ಕೇಳಿರಯ್ಯ !
ಶಿವಭಕ್ತಿ ಪುಲಕಿತ ಭಕ್ತ ಹೃದಯದಲ್ಲಿ,
ಭಕ್ತತ್ತ್ವ ಮತ್ತು ಭಕ್ತಿತತ್ತ್ವ ಶಕ್ತಿ ತುಂಬಿಕೊಂಡಿರುವುದರಿಂದ,
ಶಿವಧರ್ಮೋನ್ನತಿಗಾಗಿ ಶ್ರಮಿಸುತ್ತಿರುವನಾದುದರಿಂದ,
ಈ ಭಕ್ತನಿಗೆ, ಸ್ವಾಮಿತ್ವ ಪೂಜ್ಯತ್ವ ಪ್ರಾಪ್ತವಾಗಿ
ಈತನೆ ಸ್ವಾಮಿ-"ಗುರು"ವೆನಿಸಿಕೊಂಬನು ನೋಡಾ!
ಈಸ್ವಾಮಿ-ಗುರುವೆನಿಸಿದ ಭಕ್ತನೆ, ಧರ್ಮಾಭಿವೃದ್ಧಿಗಾಗಿ
ನಾಡಿನಲ್ಲೆಲ್ಲ ಸಂಚರಿಸಲು "ಚರಜಂಗಮ" ನೆನಿಸಿಕೊಂಬನು ನೋಡಾ!
ಇಂತಹ ಶಿವಭಕ್ತನೆ, ತಾನಿರುವ ಸ್ಥಳದಲ್ಲಿಯೆ ಇದ್ದುಕೊಂಡು,
ಶಿವಭಕ್ತಿ-ಶಿವಧ್ಯಾನ-ಶಿವಜ್ಞಾನ-ಶಿವಾಚರಣೆಯ
ಧರ್ಮ ಪುರೋಭಿವೃದ್ಧಿಕಾರ್ಯ ಮಾಳ್ಪವನಾದುದರಿಂದ
ಇವನೆ ಸ್ಥಿರ ಜಂಗಮನೆನಿಸಿಕೊಂಬನು ನೋಡಾ!
ಇಂತೀ ಈಶ್ವರ ಸೃಷ್ಟಿಯ ಪುರೋಭಿವೃದ್ಧಿಗಾಗಿ, ನಿತ್ಯವೂ
ಶಿವನ ಕಾರ್ಯದಲ್ಲಿ ಸಹಾಯಕರಾಗಿರ್ದು! ಇಡಿ ಪ್ರಪಂಚವನೆ
ಪಾರಮಾರ್ಥತತ್ತ್ವಕ್ಕೆ ಪರಿವರ್ತಿಸುವ ನಮ್ಮ ಶಿವಶರಣರ ಮಹಿಮೆ
ಅನುಪಮವಾಗಿಪ್ಪುದು ನೋಡಾ! ಶ್ರೀ ಶೈಲಮಲ್ಲಿಕಾರ್ಜುನ!"

### ಬಸವತತ್ತ್ವ ರಹಸ್ಯ-141

"ತಂದೆ ಬಸವಣ್ಣ! ನಿಮ್ಮ ಲೋಕ ಹಿತಾರ್ಥ ಮಹಾತತ್ವದ
ಅಪಾರ್ಥಗೆಯ್ಯುವರ ಕಂಡು, ನಾನು ನೊಂದು ಕಳವಳಗೊಂಡೆ ನೋಡಯ್ಯ!
ಒಂದುವರ್ಗ ಅಂತರಂಗ ವಿರೋಧಿ,
ಇನ್ನೊಂದು ವರ್ಗ ಬಹಿರಂಗ ವಿರೋಧಿ,
ಮತ್ತೆ ಕೆಲರು ಸ್ವಾಮಿಗಳೆಂಬವರು ಷಡುಸ್ಥಲ ತತ್ತ್ವವಿಕೃತಗೊಳಿಸಿ
ನಿಜಾರ್ಥವಂ ಪೇಳದೆ ಧರ್ಮದ್ರೋಹಿಗಳಾಗಿಹರಿಂದು ನೋಡಯ್ಯ!
ಇಂತಿವರ ಮಧ್ಯದಲಿ ಷಟ್‌ಸ್ಥಲದ ಒಂದೊಂದು ಸ್ಥಲ ಜಾತಿವಾಚಕವಾಗ
ಬೇಕೇನಯ್ಯ ?

ಪೂಜ್ಯಪವಿತ್ರ ದೈವ ಭಕ್ತಂಗೆ ಸ್ಥಾನವಿಲ್ಲವೇನಯ್ಯ !
ಬರಿಕಾವಿ ವೇಷವ ಹೊತ್ತಿಡೆ ಪೂಜ್ಯತೆ ಪ್ರಾಪ್ತವಾಗಿತ್ತೇನಯ್ಯ?
ಕಾಣಬಾರದ್ದು ಕಾಣಬೇಕೇನಯ್ಯ? ಕೇಳಬಾರದ್ದು ಕೇಳಬೇಕೇನಯ್ಯ
ಇದು ಕಲಿಯ (ಕಲಂಕ) ಮಹಿಮೆಯೇನಯ್ಯ?
ಭಕ್ತ-ಗುರು-ಲಿಂಗ-ಜಂಗಮದೇಕ ತತ್ತ್ವದ ನಿಜಾರ್ಥವನಿಳೆಗೆ
ತಿಳುಹಬಾರಾ ಎನ್ನ ಜಗದಾರಾಧ್ಯ
ಪರವಾ ಜಗದ್ಗುರು ಬಸವಣ್ಣ ತಂದೆ! ನಿರ್ಮ ಧರ್ಮ!
ಸಾಸಿರ ಯುಗಂಗಳಳಿದು ಸೃಷ್ಟಿಅನಂತ ಪ್ರಳಯಂಗಳನು ಕಳೆದಡು,
ಬಸವತತ್ವ ನಿತ್ಯ- ಅಮೃತತ್ವವೆಂಬೆ!
ಅಖಂಡ ಪರಶಿವನಾಣೆ! ಇದು ಸತ್ಯ
ಸಿದ್ಧಾಂತ ಕಾಣಾ ! ಶ್ರೀ ಶೈಲಮಲ್ಲಿಕಾರ್ಜುನ! "

---

## ಹೃದಯದ್ವಾರದ ತೆರೆದಿಲ್ಲ

ಟೀ 1-B. ನಿತ್ಯನಿರಂತರವೂ ದೈವೀಶಕ್ತಿಯ ವಿಶ್ವಪ್ರೇಮವು ಧರೆಗಿಳಿದು ಧಾರಾತೀರ್ಥದೋಲು ಒಂದೇಸಮನೆ ಸುರಿಯುತ್ತಲಿದೆ. ಆದರೆ ಮರುಳು ಮಾನವನು ತನ್ನ ಹೃದಯದ ಬಾಗಿಲನ್ನೆಲ್ಲಾ ತೆರೆದು ಕೊಂಡಿಲ್ಲ; ದೈವೀಶಕ್ತಿಯ ಆಗಮನಕ್ಕೆ ಇವನ ಹೃದಯದಲ್ಲಿ ಇಂಬಿಲ್ಲ.

## ತತ್ತ್ವದ ಅಸಾರ್ಥ–ವಿಷಯಾಸಕ್ತ ವಿರಕ್ತ [142]

‟ಬಸವ ಭಕ್ತಿಯ ದುರ್ಲಾಭಪಡೆವ ಇಂದಣ ವಿಷಯಲಂಪಟ
ವಿರಕ್ತರಾಹೇಯು ನಡೆ-ನುಡಿ ಹೀನಕೃತಿಯನೆಂತುಸುರಬೇಕಯ್ಯ!
ಭಕ್ತರ ಮನೆಯೊಳು ರುಚಿಕರಮಾದ ಮೃಷ್ಟಾನ್ನವನುಂಡು
"ಗುರು-ಲಿಂಗ-ಜಂಗಮಕೆ ತನುಮನ-ಧನ ಕೊಡಬೇಕು" ಎಂದು
ಶ್ರೀ ಬಸವಣ್ಣನವರ ವಚನವಿರುವುದರಿಂದ
ನಿನ್ನ ಸತಿಯನು ಕೊಡೆಂದು ಕೇಳುವ ಈವಿಷಯ ವಿಕಾರಿ
ವಿರತರ ದುಷ್ಕೃತಿ ಲೋಕಪ್ರಳಯಕಾರಿ ಕಂಡಯ್ಯ !
ಇಂತಹ ನಾರಕಿಗಳವೆಂದಿಗೂ ತೋರದಿರಾ ತಂದೆ !
ಇಂತೀ ಪಾಪಿಗಳ ಕೂಟವಮಾದ ವಿಷಯಲಂಪಟ ವಿರಕ್ತರನಳಿಸಿ,
ಬಸವತತ್ತ್ವದ ನಿಜಾರ್ಥವನರುಹಿ ಶಿವಧರ್ಮವೃಕ್ಷವ
ರಕ್ಷಿಸಬಾರಾ ಭಕ್ತಬಂಧು ! ಧರ್ಮಸಿಂಧು !
ದಯಾನಿಧಿ ! ಶ್ರೀ ಶೈಲಮಲ್ಲಿಕಾರ್ಜು !"



## ಸತ್ಯಾರ್ಥ ಬೋಧ [143]

### ತನು-ಮನ-ಧನವೀವ ನಿಜಾರ್ಥ:

"ಗುರು-ಲಿಂಗ-ಜಂಗಮಕೆ ತನು-ಮನ-ಧನವನರ್ಪಿಸುವ
ರೀತಿ ನೀತಿ ನಿಜಾರ್ಥವನು ನೀವು ವಿರತ-
ರೆಂಬುವರೆಲ್ಲ ತಿಳಿಯಿರೋ ! ಕೇಳಿರೋ !
ನಮ್ಮ ಬಸವಣ್ಣನೇ ಅಂದು ನಿಮ್ಮಂಥ ಅನಾಚಾರಿಗಳ ಕಂಡು
ನುಡಿದೆಚ್ಚರಿಸಿದ ಅಮರವಾಣಿ:
"ಸದ್ಗುರು ಮಾರ್ಗಾಚರಣೆಯ ನೆಲೆ ಕಲೆಯನರಿಯದೆ
ಸದಾಚಾರ ಸದ್‌ಭಕ್ತನಲ್ಲಿ, ಆಡಂಬರ ಲಾಂಛನದ ಕಾವಿವೇಷವ ಧರಿಸಿ
ಗ್ರಾಸವ ಹೊರೆದು, ಗುಹ್ಯ ಲಂಪಟ ಹೆಚ್ಚಿ
ಆ ಭಕ್ತನ ಕ್ರಿಯಾ ಶಕ್ತಿಗೆ ಭ್ರಮಿಸುವನೊಬ್ಬ
ಚರಪ್ರಾಣಿಯ ಜಡಜಂತುವೆಂಬೆನಯ್ಯ.
ಅಂತಾ ಕಾಮವಿಕಾರ ಭ್ರಾಂತನ ಕಾಮುವ ಹರಿಹರಿಸಿ,
ಲಿಂಗಾಂಗ ನಿಷ್ಠಾಪರತ್ವವ ಹೇಳದೆ
ತಾಭೋಗಿಸುವ ಸ್ತ್ರೀಯಳ ಕೊಡುವನೊಬ್ಬ
ಸ್ಥಾವರ ಪ್ರಾಣಿಯ ಕ್ರಿಮಿಕೀಟಕ ಪ್ರಾಣಿಯೆಂಬೆನಯ್ಯ !
ಇಂತು ತನು-ಮನ-ಧನಂಗಳ ಕೊಟ್ಟು ಕೊಂಬ ವಿಚಾರವನರಿಯದೆ
ಬಿಂದುವೆ ನಿಜಶೇಷವೆಂದು ತಿಳಿಯದ
ಮೂಳನಿಗೆಲ್ಲಿಯದೊ ತ್ರಿವಿಧ ಪ್ರಸಾದ ?
ಸ್ಥಲದಿಂದ ಸ್ಥಲವನರ್ಪಿಸುವುದು ಒಡಲ ಗುಣ.
ನಿಃಸ್ಥಲದಿಂದ ನಿಃಸ್ಥಲವನರ್ಪಿಸುವುದು ಪ್ರಾಣನಗುಣ.

---

ಟಿ. 2. "ಸರ್ವಜ್ಞಕವಿ"ಯ ದೃಷ್ಟಿ'ಯಲ್ಲಿ ಬಸವಣ್ಣ

ಆದಿಗುರು ಬಸವಣ್ಣ :

‟ಆದಿ ಗುರುರಾಯನು ಭೇದಿಸಿ ಲಿಂಗವಕೊಟ್ಟ ಮೂದೇವರೊಡೆಯ ಮೂಜಗದ ಕರ್ತನೇ
ಆದಿ ಗುರುಬಸವ ಸರ್ವಜ್ಞ " ||1||

ಇಷ್ಟಲಿಂಗಧಾರಣೆ :

‘,ಹರನೆ ಗುರುವಾಗಿ ತಾಮ್ಮರ್ತ್ಯಲೋಕಕೆಬಂದು ಪರಶಿವಲಿಂಗವನು ಕರಕೆ ತಂದು
ಕೊಟ್ಟ ಗುರುವೆ ಬಸವಣ್ಣ ಸರ್ವಜ್ಞ " ||2||

ಜಗದಾದಿಬಸವ :

''ಬಸವನೇ ಜಗದಾದಿ ಬಸವನೇ ಜಗದೀಶ ಬಸವನೇ ಜಗದ್ಗುರು ಪ್ರಣಮವೆಂದರಿದು
ಬಸವನನು ಜಪಿಸು ಸರ್ವಜ್ಞ'' ||3||

ಭಕ್ತನೇಕುಲಜ :

''ನಡೆವುದೊಂದೇ ಭೂಮಿ ಕುಡಿಯುದೊಂದೇನೀರು ಸುಡುವಗ್ನಿಯೊಂದೇಇರುತಿರಲು
ಕುಲಗೋತ್ರ ನಡುವೆ ಎತ್ತಣದು ಸರ್ವಜ್ಞ'' ||4||

ಬಸವನಾಮವೆ ಮಂತ್ರ :

''ಬಸವನೆಂದರೆ ಪಾಪದೆಸೆಗೆಟ್ಟು ಹೋಗುವುದು, ಬಸವನ ಪಾದವ ನಂಬಿದ ಭಕ್ತರೆಲ್ಲ
ಹಸನಾದರಯ್ಯ ಸರ್ವಜ್ಞ'' ||5||

ಕುಲಜ್ಞಾನವಾಣಿ :

''ಬಸವ ಪೀಠವು ಎದ್ದು ವೊಸೆದು ನಾಣ್ಯವುಬೆಳಗಿ ಬಸವನಾ ಮುದ್ರೆ ಮೆರೆದಾವು
ಜಗವವಗೆ ವಶವಾಗದಿಹುದೆ ಸರ್ವಜ್ಞ' ||6||

ಸಂ. ಚನ್ನಪ್ಪ ಉತ್ತಂಗಿ 'ಸರ್ವಜ್ಞ ವಚನಗಳು'

---

"ಧರ್ಮಜ್ಞಕವಿಯ ದೃಷ್ಟಿಯಲ್ಲಿ ಬಸವಣ್ಣ

ಭಕ್ತಿನಿರ್ಭರತೆ :

'ಭಕ್ತಿಯಿಂ ಕಂಪಿಸುತೆ ಕೂಡಲಸಂಗಾಯೆನುತೆ, ಶಕ್ತಿ ಬೇಡ್ವ ವಿಶ್ವಕಲಾಣ್ಯಕಾರ್ಯಕ್ಕೆ
ಭಕ್ತಿಬಸವಣ್ಣ ! ಧರ್ಮಜ್ಞ ||1||

ಅನುಭವ ಮಂಟಪ :

''ಬಸವ ಭಕ್ತಿ ಹುಟ್ಟಿತು ದಶದಿಕ್ಕು ಬೆಳಗಿತು ಪೊಸಧರ್ಮ ಕಳೆಯೇರಿ
'ಅನುಭವ ಮಂಟಪ' ಎಸೆಯೆ ಕಲ್ಯಾಣದಲ್ಲಿ ! ಧರ್ಮಜ್ಞ ||2||

ಶೂನ್ಯ ಸಿಂಹಾಸನ :

'ಅಲ್ಲಮಪ್ರಭುದೇವ' 'ಶೂನ್ಯ ಸಿಂಹಾಸನದಲ್ಲಿ ಸಲ್ಲಲಿತಮಾಗಿ ರಾಜಿಸೆ ಬಸವ ಬಳಗದೊಡನೆ
ಪಲ್ಲವಿಸಿತು ಧರ್ಮವೃಕ್ಷ ! ಧರ್ಮಜ್ಞ ||3||

ಅನುಭಾವ ಚರ್ಚೆ

ಸೊನ್ನಲಿಗೆ ಸಿದ್ಧರಾಮ ಮಹಾದೇವಿಯಕ್ಕ ಮೇಣ್, ಚೆನ್ನಬಸವಣ್ಣ ಶರಣರಲ್ಲಿ ನಡೆಯಿಸೆ
ಸನ್ನಿಯಿಂ ಅನುಭವ ಚರ್ಚೆ ! ಧರ್ಮಜ್ಞ ||4||

ಶಿವಭಕ್ತನೆ ಕುಲಜ :

'ಶಿವಭಕ್ತನೆ ಕುಲಜನು! ಭವಿಗೆ ಭಕ್ತಿಯೆಲ್ಲಿ ? ಶಿವತತ್ತ್ವ ಸಾರಿದನಿಂತು ಧರೆಗೆ ನಿಂತು!.
ಶಿವನೊಲಿದಾತನೆ ಭಕ್ತ! ಧರ್ಮಜ್ಞ ||5||

ಕಲ್ಯಾಣ ವೈಭವ :

ಮುತ್ತು ಹರಹಿಂದ ಪಥದಿ ಬರುತಿರಲು ಬಸವಣ್ಣ ಸುತ್ತೆಲ್ಲ ತಳಿರು ತೋರಣ ರತ್ನಗಂಬಗಳು
ಭಕ್ತಿಕಲ್ಯಾಣದೊಳು ! ಧರ್ಮಜ್ಞ ||6||

ಶ್ರೀ ಬಸವೇಶ್ವರ ಶತಕದ್ವಯ ತ್ರಿಪದಿ ಸಾಹಿತ್ಯ



ನೋಡಿ ಆರೈವುದೆ ಅರ್ಪಿತಗುಣ
ಇಂತಾ ಮಹಂತರ ತೋರಿ ಬದುಕಿಸಯ್ಯಾ
ಕೂಡಲಸಂಗಮದೇವಾ."

ಇಂತು ವೀರಶೈವ ಧರ್ಮಾಚರಣೆಯ ಅಂತಃಸತ್ವ ಮಹತ್ವವನರಿಯದೆ
ಲಾಂಛನಧಾರಿಗಳಾಗಿ ವಿಷಯಕ್ಕೆಳಸುವವರನು,
ಶ್ರೀ ಬಸವಣ್ಣನವರು :- "ಚರಿಸುವಪ್ರಾಣಿ" "ಜಡಜಂತು" ಎಂದು
ಕಡೆಗೆಯ್ದು ಬೈಯ್ದಿರ್ಪುದನರಿಯಿರೊ !
ಭಕ್ತನಾದಡು,- ಆ ಕಾಮವಿಕಾರ ಭ್ರಾಂತರಿಗೆ ಛೀಮಾರಿಗೆಯ್ದು
ಬುದ್ಧಿ ಹೇಳಿ ಅವನ ಮನೋವಿಕಾರಗಳನೆಲ್ಲ ಕಳೆದು
"ಲಿಂಗಾಂಗ ಸಾಮರಸ್ಯ ಸುಖಾನುಭವಾನಂದದಲ್ಲಿ
ನಲಿಯಬೇಕಾದಂತಹ–ತಮ್ಮಂಥಹರಿಗೀ
ದುರಾಲೋಚನೆಯುಂಟಾಗ ತಕ್ಕದ್ದಲ್ಲ"-
ಎಂದು ತಿಳಿಸಿ ಹೇಳಬೇಕಯ್ಯ !
ಅದನ್ನು ತೊರೆದು ಶಿವಶರಣರಾ ವಚನಮಂ ಸರಿಯಾಗಿ ತಾಅರ್ಥೈಸದೆ
ತತ್ತ್ವವ ತಿಳಿಯದೆ, ತನ್ನ ಧರ್ಮಪತ್ನಿಯನೆ
ಕೊಡುವವನು ಭಕ್ತನಲ್ಲ! ಜಡಪ್ರಾಣಿ
ಕ್ರಿಮಿ ಕೀಟದಂತೆ ಕಡೆಯಾಗಿಪ್ಪನಯ್ಯಾ !
ಇಂತೀ ನಮ್ಮ ಬಸವೇಶ್ವರ ವಚನಾಮೃತದ ನಿಜಾರ್ಥ ಕಾಣಾ !
ಶ್ರೀ ಶೈಲಮಲ್ಲಿಕಾರ್ಜುನ !"

ಮೂಢಭಕ್ತಿಯಳಿಯಬೇಕು: [144]

''ಸಮಾಜದಲ್ಲಿ ನಾವು ಹಿರಿಯರೆಂದುಕೊಂಡು ಕೆಲವುಗುರುಗಳು
ತಾವು ಸ್ವಾಮಿ ಗುರುಗಳೆಂದುಕೊಂಡು ಮೆರೆಯುತ್ತ,
ಆತ್ಮ ಸಂಶೋಧನೆಯಿಲ್ಲದೆ ಶಿವಭಕ್ತಿ ಶೂನ್ಯರಾಗಿರ್ದು,
ಭಕ್ತರಮೂಢಭಕ್ತಿಯ ದುರ್ಲಾಭ ಪಡೆದು,
ಲೋಕೈಕ ಬಂಧುವಾದ ಆ ಬಸವ ಮಹಾತ್ಮನ
ನಿಜ ತತ್ತ್ವಾರ್ಥವನು ಕೃತಕಗೊಳಿಸಿ ಪ್ರಚುರಪಡಿಸಿ,
ತಮ್ಮ ಪಾಪದ ಹೊಟ್ಟೆಯನು ಹೊರಕೊಂಬ,
ಇಂತಪ್ಪ ಗುರು-ವಿರಕ್ತ ಪಾಪಿ ಹಿರಿಯರೆಲ್ಲ ನೆರೆದು, ಸಮಾನತೆಯ
ಸಮಾಜವನು ಬಸವಧರ್ಮವನು ಸಮಾಧಿಗೆಯ್ವರು ನೋಡಾ !
ದ್ವಿತೀಯಶಂಭು ! ವೀರಶೈವಧರ್ಮ ಸಿಂಧು !
ಭಕ್ತಬಂಧು ! ಬಸವಣ್ಣ ! ರಕ್ಷಿಸಬಾರಾ ನಿಮ್ಮ ಧರ್ಮ !
ನಿಮ್ಮಧರ್ಮ !! ಶ್ರೀ ಶೈಲಮಲ್ಲಿಕಾರ್ಜುನ.'

## ಕಾಲಜ್ಞಾನ ವಾಣಿ: [145]

"ಗುರು-ವಿರಕ್ತರಾ ಪ್ರಪಂಚ ನಡೆದು,
ಧರ್ಮಲಂಡರು ಬೆಳೆದು, ಸತ್ಯವಾಣಿಯ ನುಳಿದು,
ಕಲಿಧರ್ಮ ಬಲಗೊಂಡು ಸದ್ಧರ್ಮ ಕಳೆಗುಂದಿ,
ಇಳೆಯು ಭಾರಗೊಂಡು ಕರ್ಮ ಹೆಚ್ಚುವಂದು,
ಭೂದೇವಿ ತಳಮಳಿಸಿ ಕೂಗಿ ಕಂಪಿಸುವಂದು,
ಅಂದು ಕಲ್ಯಾಣದಲಿ ಸಾರಿರ್ದ "ಕಾಲಜ್ಞಾನವಾಣಿ" ಸಂದು,
ಏಳುನೂರೆಪ್ಪತ್ತು ವರುಷ ಪೂರ್ತಿಗೊಳ್ಳುವಂದು,
ಏಳುನೂರೆಪ್ಪತ್ತು ಅಮರ ಗಣಾಧೀಶರೆನೆ ನಮ್ಮ
ಚೆನ್ನಬಸವಾದಿ ಪ್ರಮಥರೈತಂದು ಧರ್ಮಮಂ ರಕ್ಷಿಸಿ
ಶಿವಭಕ್ತಿಯಂ ಬೆಳೆಸಿ ಭುವನ ಪಾವನಂಗೊಳಿಪ್ಪ
ಅಮೃತಯೋಗಧಾ ಮಹಾಪರ್ವಕಾಲವದು
ಕೇಳಾ ಶ್ರೀ ಶೈಲಮಲ್ಲಿಕಾರ್ಜುನ !"

---

### "ಬಸವಾವತಾರಿ" ಸಿದ್ಧಗಂಗಾಧಿಪತಿ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು.

ಟೀ:3. ಶ್ರೀ ಶಿವಶರಣರಮೇಲಿನ ಕಾಲಜ್ಞಾನವಾಣಿಯಂತೆ ಶ್ರೀಸಿದ್ಧಗಂಗಾಧೀಶ ಶ್ರೀಶ್ರೀ ಶಿವಕುಮಾರಮಹಾಸ್ವಾಮಿಗಳವರೇ "ಬಸವಾವತಾರಿ" ಎಂಬುದು ತ್ರಿವಾರಸತ್ಯ! ತ್ರಿಕಾಲಸತ್ಯ! ಪರಮಪೂಜ್ಯರು ಕೈಗೊಂಡ ಮಹಾಮಣಿಹವಾದ, ದಿನವಿಡಿ ಹತ್ತು ಸಾವಿರ ಸರ್ವಧರ್ಮದ ಮುದ್ದು ಮಕ್ಕಳಿಗೆ ಅನ್ನಪ್ರಸಾದ, ಜ್ಞಾನಪ್ರಸಾದ, ವಸತಿ ಸೌಕರ್ಯದೊಡನೆ ನೂರಾರು ಮಹಾ ವಿದ್ಯಾಲಯಗಳನ್ನು ನಡೆಯಿಸುತ್ತ ನೂರಾರು ವರ್ಷಗಳಿಂದಲೂ ಅವೆಲ್ಲವುಗಳ ಮೇಲ್ವಿಚಾರ ಣೆಯಲ್ಲಿ–ಎಂಬತ್ತೈದಕ್ಕೂ ಮೀರಿದ ವಯೋವೃದ್ಧರೂ, ಜ್ಞಾನವೃದ್ಧರೂ, ಮಾತ್ರವಲ್ಲದೆ ಲಿಂಗ ತಪೋನಿಷ್ಠರೂ, ಶಿವಯೋಗ ಸಂಪನ್ನರೂ, ವಿಶ್ವಶಕ್ತಿಪೂರ್ಣ ಮಾತೃ ವಾತ್ಸಲ್ಯ ಹೃದಯರೂ ಆಗಿದ್ದ ಇಂತಹ "ಬಸವಾವತಾರಿ" ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಗಳಂತಹ "ವಿಶ್ವ ಧರ್ಮಸಂಸ್ಥೆ"ಯನ್ನು ಅದ್ಭುತ ಪವಾಡವೆಂಬಂತೆ ನಡೆಯಿಸಿಕೊಂಡು ಬಂದಂತಹಮಹಾನುಭಾವಿ ದಿವ್ಯಾತ್ಮ ಇಂದು ಲೋಕದಲ್ಲಿ ಮತ್ತಾರು ಸಿಕ್ಕುವಂತಿಲ್ಲ - ಇಂದು ನಾವು ನೂರಾರು ಸ್ವಾಮಿ– ಗುರು–ಜಗದ್ಗುರುಗಳನ್ನು ನೋಡುತ್ತೇವೆ. ಆದರೆ ಏನುಮಾಡುವುದು ? ಕಲಿಧರ್ಮ ಇಲ್ಲಿ- ಷಟ್‌ಸ್ಥಲ ಜ್ಞಾನಚಕ್ರವರ್ತಿ ಚೆನ್ನಬಸವಣ್ಣನವರ ವಚನಾಮೃತವೊಂದು ನೆನಪಿಗೆ ಬರುತ್ತದೆ. "ಹುಟ್ಟಿದ ಮನುಜರೆಲ್ಲರು ನೆಟ್ಟನೆ ಶಿವಜ್ಞಾನಿಗಳಾದೆಡೆ, ಬಟ್ಟಬಯಲೆಲ್ಲ ಗಟ್ಟಿಗೊಂಡೆಡೆ ಭವಕ್ಕೆ ಬೀಜವಿನ್ನೆಲ್ಲಿ ?" ಎಂಬುವ ಷಟ್‌ಸ್ಥಲ ಜ್ಞಾನನಿಧಿಯ ಅಮೃತ ವಚನಗೀತ ಈಗಲೂ ಆಕಾಶದಲ್ಲಿ ಕೇಳುತ್ತಿದೆ ! ಕೇಳಿಸುತ್ತಿದೆ ! ಇದೆಲ್ಲವೂ "ಬಸವಾವತಾರಿ" ಗಳಂತಹ ಪರಮ ಪೂಜ್ಯರ ಪರಮ ಪುಣ್ಯಪ್ರಸಾದ ಮಹಿಮೆಯೆನ್ನಬಹುದು.



## ವಿದ್ಯಾರ್ಥಿಜೀವನದ ಬೆಳಕು ಸರಣಿ-21.

ದಿ॥ ಬಿ. ಎಸ್. ಕೃಷ್ಣಮೂರ್ತಿ, ನಂ. 5, ಸೀತಾ ವಿಲಾಸ ರಸ್ತೆ, ಮೈಸೂರು-570024

**ವಿದ್ಯಾರ್ಥಿಗಳ ಓದಿನ ಅರ್ಥ:-** ನಿಮ್ಮ ಓದಿನಮುಖ್ಯಗುರಿ, ಗುರು ಹಿರಿಯರನ್ನು ಮೆಚ್ಚಿಸುವುದಕ್ಕಲ್ಲ. ನಿಮ್ಮವಿದ್ಯೆ ನಿಮ್ಮ ಉದ್ಧಾರಕ್ಕಾಗಿ. ಓದು ಜ್ಞಾನಾರ್ಜನೆಗೆ ಸಹಾಯ ವಾಗಬೇಕು. ಜ್ಞಾನ ಪೂರ್ಣರಾಗಿ ಸ್ವಾವಲಂಬಿಯಾಗಬೇಕು. ಆಗ ನಿಮ್ಮ ಬದುಕು ಸಾರ್ಥಕ.

ಬರೀಶರೀರ, ಅದನ್ನೊಡಗೂಡಿದ ಅಂಗಗಳಿದ್ದರೆ ಮಾತ್ರ ಪೂರ್ಣಮಾನವನೆಂದೆ ನಿಸಲಾರ. ಮನಸ್ಸು, ಬುದ್ಧಿ, ಆತ್ಮ ಇವೆಲ್ಲಾ ಸೇರಿ ಮನುಷ್ಯನೆಂದನ್ನಿಸುತ್ತಾನೆ. ಮಾನವನ ಪೂರ್ಣವ್ಯಕ್ತಿತ್ವವನ್ನು ಪ್ರಕಾಶಗೊಳಿಸುವ ಸಾಧನೆಗಳು ಅವಶ್ಯಕ. ದೇಹ, ಬುದ್ಧಿ, ಬೆಳವಣಿಗಳು ಹೇಗೆ ಮುಖ್ಯವೋ ಅದರಂತೆ ಆತ್ಮಶಕ್ತಿಯ ಬೆಳವಣಿಗೆ ಮುಖ್ಯವಾಗಿರಬೇಕು. ಕಲಿತ ವಿದ್ಯೆ ಸಾರ್ಥಕವಾಗಲು ಲಭ್ಯವಾಗುವ ಗ್ರಂಥಗಳ ಸರಣಿಯೂ ಅತ್ಯವಶ್ಯಕ. ಓದುವಾಗ ಗ್ರಂಥಕರ್ತರು ತಾವು ರಚಿಸಿದ ಗ್ರಂಥಗಳಉದ್ದೇಶ, ಅರ್ಥವಿನ್ಯಾಸ ಇವುಗಳ ಉದ್ದೇಶದ ಜಾಡನ್ನು ತಿಳಿಯುವ ಕುತೂಹಲವೂ ಇರಬೇಕು. ಬರೀಉದರ ಪೋಷಣೆಯ ವಿದ್ಯೆ ಕ್ರಮವಾದ ವಿದ್ಯಾಭ್ಯಾಸ ಎನ್ನಿಸದು. ಜ್ಞಾನವನ್ನು ಹೆಚ್ಚಿಸುವ ಆತುರ, ಆಕಾಂಕ್ಷೆಗಳು ಮನುಷ್ಯರ ಏಳಿಗೆಗೆ ಕಾರಣವಾತ್ತದೆ.

ಮನುಷ್ಯರು ಜ್ಞಾನದ ಪರಮ ಗುರಿಯನ್ನು ತಲುಪಲು ಪ್ರಯತ್ನ ಅವಶ್ಯಕ. ಪ್ರಯತ್ನವಿಲ್ಲದೆ ಯಾವ ಆಕಾಂಕ್ಷೆಯೂ ಸಿದ್ಧಿಸುವುದಿಲ್ಲ. ಜ್ಞಾನಮಧುವನ್ನು ಪಾನ ಮಾಡಿದಷ್ಟು ಅದರದಾಹ ಅಡಗುವುದಿಲ್ಲ ಅದೇಜ್ಞಾನ ಈಚಿನ ದಿನಗಳಲ್ಲಿ ಬೆಳೆದಿದ್ದರೂ ನೈತಿಕ ಮಟ್ಟ ಏರಿಲ್ಲ. ಜ್ಞಾನವೇ ಜೀವನದ ಸುಖವನ್ನು ಹೆಚ್ಚಿಸುವ ಜ್ಯೋತಿ. ನಾವು ಜ್ಞಾನವುಳ್ಳವರಾದರೂ ಅಜ್ಞಾನಿಗಳೆಂದು ಭಾವಿಸುವುದೇ ಜ್ಞಾನದ ಪ್ರಥಮ ಸೋಪಾನ. ದೇವರುಂಟೆಂಬ ತಿಳಿವನ್ನು ಅರಿಯುವ ಭಯವೇ ಜ್ಞಾನದ ಆರಂಭ.

ಜ್ಞಾನದ ಹಾದಿಯನ್ನು ಮನುಷ್ಯನು ಆಯ್ದುಕೊಳ್ಳಬೇಕೆಂಬ ಆಕಾಂಕ್ಷೆ ಇದ್ದರೆ ಅವನು ಕೆಲವು ವಿಧಿಗಳನ್ನು ಆಚರಣೆಗೆತರಬೇಕು. ಅವು ಯಾವುದೆಂದರೆ 1] ನಾನು ಯಾವಬಗೆಗೆ ಮಾತನಾಡುತ್ತೇನೆ. 2] ಯಾರಎದುರು ಮಾತನಾಡುತ್ತಿದ್ದೇನೆ 3]ಹೇಗೆ ಮಾತನಾಡುತ್ತೇನೆ 4]ಮತ್ತು ಎಲ್ಲಿಮಾತನಾಡುತ್ತೇನೆ.

ಜ್ಞಾನಿಗಳು ದರಿದ್ರಮುಸುಕಿದರೆ ಚಿಂತಿಸುವುದಿಲ್ಲ ಹೆದರದೆ ಅದನ್ನು ಎದುರಿಸುತ್ತಾರೆ, ಅವರು ಸುಜ್ಞಾನವನ್ನೂ, ಬುದ್ಧಿಯನ್ನೂ, ತಪ್ಪದೆ ಭದ್ರವಾಗಿಟ್ಟುಕೊಳ್ಳುವ ದೃಷ್ಟಿಯುಳ್ಳವರಾಗಿರುತ್ತಾರೆ. ಅವು ಅವರಿಗೆ ಜೀವವೂ, ಭೂಷಣವೂ ಆಗಿರುತ್ತವೆ. ಜ್ಞಾನವನ್ನು ಹೆಚ್ಚಿಸುವ ಗ್ರಂಥಗಳನ್ನು ಆಯ್ದುಓದಿ ಅವುಗಳಲ್ಲಿನ ಸಾರವನ್ನು ಸವಿಯಬೇಕು. ಜ್ಞಾನ ಏನುಮಾಡುತ್ತದೆ ಎನ್ನುವುದಕ್ಕಿಂತ ಅದು ಎಂಥಾ ಪ್ರಭಾವಿಯೆನ್ನುವುದನ್ನು ತಿಳಿದರೆ ಸಾಕು. ಏಕೆಂದರೆ ಜ್ಞಾನಕ್ಕೆ ಸಮನಾದ ಪವಿತ್ರವಸ್ತು ಬೇರೊಂದಿಲ್ಲ.

ಹೆಚ್ಚು ಜ್ಞಾನವನ್ನು ತಿಳಿಯಲು ಅರಿಸಿಕೊಂಡು ಹೋದಷ್ಟು ದೊರೆಯುವ ಜ್ಞಾನದ ಪ್ರಮಾಣವು ಕಡಿಮೆಯಾಗುತ್ತದೆ. ನಾವು ಅಜ್ಞಾನವನ್ನು ಹೊಡೆದೊಡೆಸಬೇಕು. ಏಕೆಂದರೆ ಅದು ಕಲೆಯ ಶತೃ. ಅಜ್ಞಾನಿಗಳ ಜೊತೆಯ ಅಧಿಕ ಸ್ನೇಹಕ್ಕಿಂತ ಸುಜ್ಞಾನಿಗಳಕೂಡ ಜಗಳವೇಲೇಸು! ಅಜ್ಞಾನಿಯಾಗಿರುವುದು ಮಾನವನ ವಿಶೇಷಹಕ್ಕಲ್ಲ. ತಾನು ಅಜ್ಞಾನಿಯೆಂಬುದನ್ನು ತಿಳಿಯುವುದು ಅವನ ವಿಶೇಷಾಧಿಕಾರ. ಜ್ಞಾನದ ಬೆಳಕು ಹೊರಗಡೆಯಿಂದ ಹತ್ತಿಸಬಲ್ಲ ಮತ್ತು ಸರಿಮಾಡಬಲ್ಲ ಲ್ಯಾಟೀನಿನ (Lantern) ಬೆಳಕಲ್ಲ. ಅದು ಸ್ವಯಂಪ್ರಭೆ ಬೀರುವ ಮಿಂಚಿನ ಹುಳದ ಜೀವಕ್ರಿಯೆಯ ಫಲವಾದ ಬೆಳಕು.

ಜ್ಞಾನಿಗೆ ಬಂದು ದಾರಿದ್ರ್ಯಕ್ಕಿಂತ ಅಜ್ಞಾನಿಗೆ ಬಂದ ಐಶ್ವರ್ಯ ಸಮಾಜಕ್ಕೆ ಹೆಚ್ಚುಹಾನಿಕರ. ಜ್ಞಾನವು ಎಲ್ಲಾ ಬಗೆಯ ಪುಸ್ತಕಗಳ ಓದಿನಿಂದಾದ ಜ್ಞಾನವೇಶಕ್ತಿ, ಜ್ಞಾನವೇ ಎಲ್ಲಾ ಸುಧಾರಣಾ ಆಂದೋಲನದ ಸಫಲತೆಗೆ ಕಾರಣ. ಜ್ಞಾನವೇ ಬಾಳಿನ ನಂದಾದೀಪ.

ಜ್ಞಾನದಿಂದಲೆ ಇಹವು! ಜ್ಞಾನದಿಂದಲಿ ಪರವು! ಜ್ಞಾನವಿಲ್ಲದಿರೆ ಸಕಲವೂತನಗಿದು ಹಾನಿ ಕಾಣಯ್ಯ!! ಎಂಬುದಾಗಿ ಸರ್ವಜ್ಞನು ನುಡಿದಿರುವನು.

ಜ್ಞಾನವುಳ್ಳವನದೇ ನಿಜವಾದ ಜೀವನ. ಜ್ಞಾನವೇ ಬಾಳಿನ ನಂದಾದೀಪ, ಜ್ಞಾನಕ್ಕಿಂತಮಿಗಿಲಾದಸುಖವಿಲ್ಲ, ಪರಮಾತ್ಮನು ಮನುಷ್ಯನಿಗೆಬುದ್ಧಿ ಕೊಟ್ಟಿರುವುದು, ತಿಳುವಳಿಕೆನೀಡಿರುವುದು, ಜ್ಞಾನಾರ್ಜನೆಗಾಗಿ ಅದರಸದುಪಯೋಗ ಮಾಡಿಕೊಂಡಾಗ ಮಾನವನು ಮಹಾತ್ಮನಾದಾನು. ದೇವರಿದ್ದಾನೆಂಬ ಭಯವೇ ಜ್ಞಾನದಮೂಲ, ಜ್ಞಾನದ ಭಂಡಾರ ಅನಂತಸಾಗರವಿದ್ದಂತೆ, ಮಾನವ ತನಗೆಶಕ್ತಿಯಿದ್ದಷ್ಟು ಕೊಡಗಳಲ್ಲಿ ತುಂಬಿಕೊಳ್ಳಬಹುದು.

ಜ್ಞಾನದಿಂದಲೆ ಇಹವು ! ಜ್ಞಾನದಿಂದಲಿ ಪರವು ! ಜ್ಞಾನವಿಲ್ಲದಸಕಲವೂ ತನಗೆ ಹಾನಿ ಕಾಣಯ್ಯ ಎಂಬುದಾಗಿ ಸರ್ವಜ್ಞನು ನುಡಿದಿರುವನು. ಅಜ್ಞಾನ, ಆಶಿಸ್ತು ಮನುಷ್ಯನ ತೊಂದರೆಗಳಿಗೆ ಕಾರಣ. ಜ್ಞಾನವು ಒಂದು ಕಾಡುಮೃಗದಂತೆ. ಪಳಗಿಸುವ ಮೊದಲು ಅದನ್ನು ಬೇಟೆಯಾಡಿ ಹಿಡಿಯ ಬೇಕಾಗುತ್ತದೆ. ಜ್ಞಾನವೆಂಬುದು ಮಹಾನಿಧಿ. ಅದು ಜಗತ್ತಿನ ಎಲ್ಲಾ ಸಂಪತ್ತುಗಳಿಗಿಂತಲೂ ಮಿಗಿಲಾಗಿದ್ದು. ಅದನ್ನು ಯಾರು ಕೊಳ್ಳೆಹೊಡೆಯಲು ಸಾಧ್ಯವಿಲ್ಲ.

ನಿಜವಾದ ಜ್ಞಾನಿಯು ಕರ್ಮಫಲವನ್ನು ಅಪೇಕ್ಷಿಸುವುದಿಲ್ಲ. 'ಜ್ಞಾನ' ನ್ಯಾಯಶೀಲ ಎನ್ನುವುದಕ್ಕಿಂತ ಹೆಚ್ಚಿನ ಪ್ರಶಂಸೆ ಬೇರೆಯಿಲ್ಲ. ಜ್ಞಾನವು ನಾವು ಅಧ್ಯಯನ ಮಾಡಿದಷ್ಟೂ ವೃದ್ಧಿಯಾಗುತ್ತದೆ. ನಾವು ತಪಸ್ಸು ಮಾಡಿದಷ್ಟೂ ನಮ್ಮ ಅಜ್ಞಾನದ ಅರಿವಾಗುತ್ತದೆ. ದೇವರನ್ನು ಅರ್ಥಮಾಡಿಕೊಳ್ಳುವುದೇ ಜ್ಞಾನ.

ಸೂಚನೆ:- ಈಜ್ಞಾನದಬೆಲೆ ಎಷ್ಟೆಂಬುದನ್ನು ತಿಳಿಯಲು ಅನೇಕ ಗ್ರಂಥಗಳ ಅಧ್ಯಯನಮಾಡಿ ಸಂಗ್ರಹಿಸಿರುತ್ತೇನೆ. ಸಾರ್ವಜನಿಕರು ಇದರ ಗೂಡಾರ್ಥವನ್ನು ತಿಳಿದುಆಚರಿಸಿದರೆ ಕೀರ್ತಿಶಾಲಿಗಳಾಗಬಹುದು ಆಗನನ್ನ ಈಶ್ರಮಕ್ಕೆ ಪ್ರತಿಫಲ ಬಂದಂತೆ ಭಾವಿಸುತ್ತೇನೆ.

## ಯಾರು ದೊಡ್ಡವರು

ಬಿ. ಮಲ್ಲಿಕಾರ್ಜುನ, ನಂ. 5-4-60, ಸೋಮವಾರಪೇಟೆ ರಾಯಚೂರು-584101

ಅಯ್ಯಾ,

ಮನುಷ್ಯನು ತಾನು ಶರಣನಾಗದಿದ್ದರೂ
ಸಂತನಾಗದಿದ್ದರೂ, ಜ್ಞಾನಿಯಾಗದಿದ್ದರೂ
ಜ್ಞಾನಿಗಳ, ಶರಣರ, ಸಾಧು-ಸಂತರ
ಚರಿತೆಯನೋದಿ ಕೇಳಿ, ಸತತ ಮನನ
ಮಾಡಿಕೊಂಡು ಅರಿತು ಮಾನವನಾಗಿ
ಬಾಳಿದರೆ ಸಾಕಯ್ಯ ಶ್ರೀಗುರುವೆ ಚೆನ್ನವೀರ.

ಅಯ್ಯಾ,

ಮಠವು ಮಠವಾಗಿರಲಿ
ಸಂಸಾರದ ಮನೆಯಂತಾಗದಿರಲಿ,
ಮನೆಯು ಸುಖ ಶಾಂತಿಯಿಂದಿರಲಿ,
ಮನವು ಆ ಶಿವನ ನೆನೆಯುತಿರಲಿ,
ಅಂತಿದ್ದೊಡೆ ಚೆಂದ ನೋಡಾ,
ಶ್ರೀ ಗುರುವೆ ಚೆನ್ನವೀರ.

ಅಯ್ಯಾ,

ಸಣ್ಣತನವನು ಅಳಿಸಿ
ದೊಡ್ಡತನವನು ಬೆಳೆಸಯ್ಯಾ,
ಸರಳ ಸುಮನದರಿಶಿ.
ಸಹನೆ, ಶಾಂತಿಯ ನೀಡಯ್ಯಾ,
ಶ್ರೀ ಗುರುವೆ ಚೆನ್ನವೀರ.

ಅಯ್ಯಾ,

ಕ್ಷಣಿಕಬುದ್ಧಿ, ಕ್ಷಣಿಕಜ್ಞಾನ
ಕ್ಷಣಿಕಲಾಭ, ಕ್ಷಣಿಕತೃಪ್ತಿ,
ಇವು ಎನಗೆ ಬೇಡವಯ್ಯಾ,
ನಿಜವಾದ ನಿಮ್ಮ ಜ್ಞಾನವನು
ಎನಗಿತ್ತು ಸಲಹಯ್ಯ, ಶ್ರೀಗುರುವೆ ಚೆನ್ನವೀರ.

'SIDDAGANGA' MONTHLY Reg. No. KRNQ-9



ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ-572 104.